# ಮುನ್ನುಡಿ

ನನ್ನ ಕವಿತೆಗಳ ಮೊದಲನೆಯ ಸಂಗ್ರಹವು ಇಲ್ಲಿ ಪ್ರಕಟವಾಗುತ್ತಿದೆ. ಹತ್ತು ಹನ್ನೆರಡು ವರುಷಗಳ ಅವಧಿಯಲ್ಲಿ ಬೇರೆ ಬೇರೆ ಸಂದರ್ಭಗಳು ಒದಗಿ ಬಂದು ಇವುಗಳ ಬರೆಹಕ್ಕೆ ಕಾರಣವಾದವು. ಒಂದೇ ತೋಟದ ಹಲವು ಬಗೆಯ ಹೂಗಳನ್ನು ಪೋಣಿಸುವಂತೆ ಇವನ್ನು ಈ 'ಬಾಸಿಗ'ದಲ್ಲಿ ಪೋಣಿಸಲಾಗಿದೆ.

ಈ ಪೋಣಿಕೆಯಲ್ಲಿ ಒಂದು ಕ್ರಮವು ಇದೆ. ಕವಿತೆಗಳಲ್ಲಿ ಪ್ರಧಾನವಾದ ಭಾವಗಳನ್ನು ಗುರುತಾಗಿ ಇಟ್ಟುಕೊಂಡು ಭಕ್ತಿಜೀವನ, ಸೌಂದರ್ಯಜೀವನ, ರಾಷ್ಟ್ರಜೀವನ, ಪ್ರೇಮಜೀವನ, ಆಂತರಿಕಜೀವನ ಎಂದು ಮೊದಲಿನಿಂದ ಕೊನೆಯ ವರೆಗೆ ಐದು ಪರಿಗಳನ್ನು ಇಲ್ಲಿ ಪರಿವಿಡಿಯಾಗಿ ಹರಹಿರುತ್ತದೆ.

ಇವುಗಳಲ್ಲಿ ಒಂದು ಪರಿ ಇನ್ನೊಂದರೊಳಗೆ ಸೇರಿದ್ದರೆ ಆಶ್ಚರ್ಯವಿಲ್ಲ. ವಿಶೇಷವಾಗಿ 'ಆಂತರಿಕಜೀವನ' ಎಂಬ ಪದವು ವಿಶಾಲವಾಗಿದ್ದು ಉಳಿದ ಎಲ್ಲ ಪರಿಗಳಲ್ಲಿ ಅದು ಬೆರೆತುಕೊಂಡಿದೆ. ಹೀಗಿದ್ದರೂ ಅದಕ್ಕೆ ಪ್ರತ್ಯೇಕವಾದ ಸ್ಥಾನವು ಅವಶ್ಯವೆಂಬುದು ಆಯಾ ಕವನಗಳಿಂದ ತೋರುವುದೆಂದು ನಾನು ನಂಬಿದ್ದೇನೆ.

ಕಾವ್ಯ ಮತ್ತು ಜೀವನ ಇವುಗಳ ನಿಕಟಸಂಬಂಧವನ್ನು ಇಂದಿನ ಹೊಸ ಕಾವ್ಯವು ಸಾರುತ್ತಿದೆ. ಕಾವ್ಯವು ಬರಿಯೊಂದು ಚಮತ್ಕಾರದ ಚಿಕ್ಕೆಯಲ್ಲವೆಂದೂ ನೆಲದಿಂದೆದ್ದ ಮರದ ಹೂವೆಂದೂ ಹಣ್ಣೆಂದೂ ಹೊಸ ಕವಿಗಳು ಅರಿತಿದ್ದಾರೆ. ಕವಿಯ ಜೀವನವು ಎಷ್ಟು ಸರ್ವಾಂಗಸುಂದರ ವಾಗುವುದೋ ಅಷ್ಟು ಅವನ ಕಾವ್ಯಕೃತಿಯು ಸರ್ವಾಂಗಸುಂದರವಾಗು ವುದು. ಕವಿಯು ಜೀವನದ ಎಲ್ಲ ಬಗೆಯ ಅನುಭವವನ್ನು ಇದಿರಿಸಿ, ಅದರ ಆಳ-ಅಗಲಗಳನ್ನು ಅರಿತು ಒಲವಿನ ನೆಲೆಯಾಗಿ ಹಿಗ್ಗಿನ ಸೆಲೆಯಾಗಿ ಬಾಳ ಬೇಕು. ಇಂಥ ಜೀವನದ ಹಿರಿಮೆಯ ರಸಮಯವಾದ ವಾಣಿಯೇ ಕಾವ್ಯ. ಹೀಗೆ ಸಮಗ್ರಜೀವನವೇ ಕಾವ್ಯವಾಗಬೇಕೆಂದು ಹಂಬಲಿಸಿ ಹವಣಿಸುತ್ತಿ ರುವ ಸಾಹಿತ್ಯಪ್ರೇಮಿಗಳಲ್ಲಿ ನಾನೊಬ್ಬನಾಗಿದ್ದೇನೆ, ಹೊಸ ಕಾವ್ಯದ ಮೇಳ ದಲ್ಲಿ ನನ್ನ ಎಳದನಿಯನ್ನು ಬೆರಸುತ್ತಲಿದ್ದೇನೆ. ಆದರೆ ಸಣ್ಣ ಕನ್ನಡಿಯಲ್ಲಿ ದೊಡ್ಡ ಆನೆಯನ್ನು ಮೂಡಿಸಲು ಎಳಸುವಂತೆ ನನ್ನ ಇಂದಿನ ಬಾಳುವೆಯು ಬಗೆಯಿರುವುದೆಂಬುದನ್ನು ನಾನು ಮರೆತಿಲ್ಲ. ಅವರವರ ಆತ್ಮೀಯ ಜೀವನ ದಿಂದ ಅವರವರ ಕಾವ್ಯನಿರ್ಮಾಣಕ್ಕೆ ಒಂದು ವ್ಯಕ್ತಿತ್ವವು ಉಂಟಾಗುತ್ತದೆ. ಹಾಗೆ ಇಲ್ಲಿಯ ಕವನಗಳಲ್ಲಿಯೂ ರೂಪಗೊಳ್ಳುತ್ತಿರುವ ವ್ಯಕ್ತಿತ್ವವೊಂದು ತೋರಬಹುದು. ಜೀವನದಲ್ಲಿಯ ಸೋಲಿನಿಂದ ಹತಾಶವಾದ ಜೀವ, ದುಃಖದಿಂದ ಜರ್ಜರಿತವಾದ ಹೃದಯ ಇವುಗಳೇ ಇಲ್ಲಿಯ ಕವಿವ್ಯಕ್ತಿಯನ್ನು ಬಹುಶಃ ಚಿತ್ರಿಸುತ್ತವೆ. ಲೋಕದ ಕರುಣ ಕಥೆಯಿಂದಲೂ ದುರ್ವಿಧಿಯ ಆಣಕಾಟದಿಂದಲೂ ಅತ್ಯಂತ ಅತೃಪ್ತವಾದ ಜೀವವು ಕಲಮಲಗೊಂಡು ಕೂಗಿಕೊಂಡಂತೆ ಇಲ್ಲಿ ಎನಿಸಬಹುದು. ಆದರೆ ತೀವ್ರವಾದ ಅತೃಪ್ತಿಯನ್ನು ನಿಜವಾದ ತೃಪ್ತಿಯಲ್ಲಿ ರೂಪಾಂತರಗೊಳಿಸಿದ ಪ್ರಫುಲ್ಲತೆಯನ್ನೂ ಒಮ್ಮೊಮ್ಮೆ ಕಾಣಬಹುದು. ಹಲವು ಕವನಗಳು ನಿರಾಶೆಯನ್ನು ವಿಚಾರಿ ನಿಂತ ಆಶಾವಾದ,

ದುಃಖವನ್ನು ಗೆದ್ದುನಿಂತ ಆನಂದ ಇವುಗಳಿಂದ ಉಂಟಾದ ರಸನಿಮಿಷಗಳಲ್ಲಿ ಮೈದೋರಿವೆ. ಪ್ರತ್ಯಕ್ಷವಾದ ಕವನಗಳಿಗಿಂತ ಆ ರಸನಿಮಿಷಗಳನ್ನು ನಾನು ಆಯುಷ್ಯದ ಅಕ್ಷಯ ನಿಧಿಯೆಂದು ಭಾವಿಸಿದ್ದೇನೆ.

ಈ ಕವಿತೆಗಳನ್ನು ಕಾವ್ಯರಸಿಕರಾದ ಕನ್ನಡಿಗರ ಕೈಯಲ್ಲಿ ಸಂತೋಷದಿಂದಲೂ ನಮ್ರತೆಯಿಂದಲೂ ನೀಡುತ್ತೇನೆ. ಇವುಗಳಲ್ಲಿ ಇದ್ದ ಗುಣವನ್ನು ಅವರು ಗ್ರಹಿಸುವರೆಂಬ ವಿಷಯದಲ್ಲಿ ನನಗೆ ಸಂಶಯವಿಲ್ಲ. ಆದರೆ ಇವುಗಳ ಕುಂದುಕೊರತೆಗಳನ್ನೂ ಸಹೃದಯರಾದ ವಿಮರ್ಶಕರು ತೋರಿಸಿಕೊಡಬೇಕೆಂದು ನನ್ನ ಮನಃಪೂರ್ವಕವಾದ ಬಿನ್ನಹವಿದೆ. ಈ ಕಾವ್ಯಸೃಷ್ಟಿಯ ಅಪೂರ್ಣತೆಯ ಅರಿವು ನನಗಿದೆ. ಮುಖ್ಯವಾಗಿ ನನ್ನ ರಸಾನುಭವಕ್ಕೂ ಅದರ ಅಭಿವ್ಯಕ್ತಿಗೂ ನಡುವೆ ದೊಡ್ಡ ಕೊರಕಲು ನಿಲ್ಲುವುದನ್ನು ನಾನು ತಿಳಿದಿರುವೆ. ಮುಗಿಲಿನಲ್ಲಿ ಮಳೆ-ಮೋಡಗಳು ಕೂಡಿ ತಂಗಾಳಿ ಬೀಸಿ ಮರಮಳೆ ಬೀಳುವುದೆಂಬಂತೆ ತೋರಿ ಕೊನೆಗೆ ನಾಲ್ಕು ಹಾರುಹನಿಗಳು ನೆಲಕ್ಕೆ ಸಿಡಿದುಹೋಗುವಂತೆ ನನ್ನ ಕವಿತೆಗಳು ಪ್ರಕಟರೂಪವನ್ನು ತಾಳುವುದುಂಟು. ಒಮ್ಮೊಮ್ಮೆ ಕಲ್ಪನಾಶಕ್ತಿಯ ತರಳತೆಯಿಂದ ಅಲಂಕಾರದೋಷಗಳು, ಶಬ್ದಶಕ್ತಿಯ ಕೊರತೆಯಿಂದ ಕಾವ್ಯಶೈಲಿಯ ದೋಷಗಳು ಇವುಗಳಲ್ಲಿ ತಲೆದೋರಿವೆ. ಇವನ್ನು ಕೇಳಿದ ನನ್ನ ಮಿತ್ರರೂ ಹಿರಿಯರೂ ನನ್ನ ನ್ಯೂನತೆಗಳನ್ನು ಗುರುತಿಸಿ ನನಗೆ ನಿಜವಾಗಿಯೂ ಉಪಕಾರಮಾಡಿದ್ದಾರೆ. ಇವರಲ್ಲಿ ಶ್ರೀ. ಬೇಂದ್ರೆಯವರು ನನ್ನ ಕವಿತಾರಚನೆಯ ಆರಂಭಕಾಲದಿಂದ ಉಚಿತವಾದ ಉತ್ತೇಜನ-ವಿಮರ್ಶೆಗಳಿಂದ ಪೋಷಿಸಿದ್ದಾರೆ, ಇವುಗಳಲ್ಲಿ ಕಾಣಬಹುದಾದ ಪ್ರಗತಿಗೆ ಕಾರಣರಾಗಿದ್ದಾರೆ. ಅವರಿಗೆ ಈ ಸಂಗ್ರಹವನ್ನು ಅರ್ಪಿಸಲು ನನಗೆ ಹೆಚ್ಚಿನ ಸಂತೋಷವಾಗುತ್ತದೆ. ನನ್ನ ಗೆಳೆಯರೂ ಅಭಿಜಾತ ವಿಮರ್ಶಕರೂ ಆದ ಶ್ರೀ. ಗೋಕಾಕ ಅವರು ಈ ಸಂಗ್ರಹದಲ್ಲಿಯ ಎಲ್ಲ ಕವಿತೆಗಳನ್ನು ಕೇಳಿ ತಮ್ಮ ಮೆಚ್ಚುಗೆಯನ್ನು ತಿಳಿಸಿ ಸಮರ್ಪಕವಾದ ಸೂಚನೆಗಳನ್ನು ಮಾಡಿದ್ದಾರೆ. ಇವುಗಳ ಕೊನೆಯ ಸಂಸ್ಕರಣಕ್ಕೆ ಅವರ ಸೂಚನೆಗಳು ಅದೆಷ್ಟು ಸಹಾಯಕವಾದವೆಂಬುದನ್ನು ನಾನು ಹೇಳಬೇಕಾಗಿಲ್ಲ. ಸ್ನೇಹದಿಂದ ಅವರು ಮಾಡಿದ ಕೆಲಸಕ್ಕೆ ನಾನು ಧನ್ಯವಾದಗಳನ್ನು ಸಲ್ಲಿಸಬೇಕೇ? ಆ ಸ್ನೇಹದಿಂದ ನಾನು ಧನ್ಯ ಎಂದಿಷ್ಟು ಮಾತ್ರ ಹೇಳದಿರಲಾರೆ.

ಹೊಸ ಕಾಲದ ಭಾವಗೀತಗಳ ಸಂದರ್ಭಗಳು ತಿಳಿಯದ್ದರಿಂದ ಅವುಗಳ ಸ್ವಾರಸ್ಯವು ಮನದಟ್ಟಾಗುವುದು ಕಠಿಣವೆಂದು ತೋರಲು ಇತ್ತೀಚೆ ಕೆಲವು ಸಂಗ್ರಹಗಳಲ್ಲಿ ಸಂದರ್ಭಸೂಚನೆಗಳು ಬರುತ್ತಿವೆ. ಇದು ಯೋಗ್ಯವೆಂದೂ ಉಪಯುಕ್ತವೆಂದೂ ನಾನು ತಿಳಿಯುತ್ತೇನೆ. ಅಂತೇ ಈ ಸಂಗ್ರಹದ ಕೊನೆಗೆ 'ನೆರವು' ಎಂಬುದಾಗಿ ಕೊಟ್ಟಿರುತ್ತದೆ. ಅದರಲ್ಲಿ ಕವಿತಾಸಂದರ್ಭ, ಮುಖ್ಯ ಭಾವ ಹಾಗೂ ಶಬ್ದಾರ್ಥ ಇವುಗಳನ್ನು ಸೇರಿಸಿದ್ದಾಗಿದೆ. ವಿಮರ್ಶಕರೂ ಸಾಮಾನ್ಯ ವಾಚಕರೂ ಈ ನೆರವಿನ ನೆರವು ಪಡೆಯಬಹುದೆಂದು ನನ್ನ ಪ್ರಾರ್ಥನೆ. ಅಲ್ಲದೆ, ಕೆಲವು ಕವನಗಳು ಹಾಡಿನ ಧಾಟಿಯಲ್ಲಿ ಇರುವುದರಿಂದ ಸರಾಗವಾಗಿ ಹಾಡಿಕೊಂಡರೆ ಅವುಗಳ ಸೊಗಸು ಹೆಚ್ಚಬಹುದು.

ಈ ಕವಿತೆಗಳ ರಚನಾಕಾಲವನ್ನು ಅಲ್ಲಲ್ಲಿ ಕೊಡಬೇಕೆಂದು ಮೊದಲು ಯೋಚನೆಯಿತ್ತು. ಆದರೆ ಹಲವು ಕವಿತೆಗಳ ಕಾಲನಿರ್ದೇಶವು ತಿಳಿಯದ್ದರಿಂದ ಎಲ್ಲವೂ ಹಾಗೆಯೇ ಉಳಿದಿವೆ. ಸಂಗ್ರಹದ ಕೊನೆಗೆ ಪ್ರಕಟಿಸಿದ ತಿದ್ದುಪಡಿಯನ್ನು ಓದುಗರು ನೋಡಿಕೊಳ್ಳಬೇಕು. ತಿದ್ದಿದಲ್ಲದೆ ಹಲವು ಕಡೆಗಳಲ್ಲಿ ಅರ್ಥವು ಸರಿಯಾಗದು. ಇಲ್ಲಿಯ ಅನೇಕ ಕವಿತೆಗಳನ್ನು ಬೇರೆ ಬೇರೆ ಪತ್ರಿಕೆಗಳಲ್ಲಿ ಆಯಾ ಪತ್ರಿಕಾಕರ್ತರು ಪ್ರಕಟಗೊಳಿಸಿದ್ದಕ್ಕೆ ಅವರಿಗೆ ನನ್ನ ನೆನಕೆಗಳನ್ನು ಅರ್ಪಿಸುತ್ತೇನೆ. ಈಗ ಈ ಸಂಗ್ರಹರೂಪವಾಗಿ ಮುದ್ದಾಗಿ ಪ್ರಕಾಶನಗೊಳಿಸುವ ಕಾರ್ಯದಲ್ಲಿ ಮನೋಹರ ಗ್ರಂಥ ಪ್ರಕಾಶನ ಸಮಿತಿಯ ಶ್ರೀ. ಜಿ. ಬಿ. ಜೋಶಿಯವರು ಬಹಳವಾಗಿ ಶ್ರಮಪಟ್ಟು ಸಹಕರಿಸಿದ್ದಾರೆ. ಹೊದಿಕೆಯ ಪುಟದ ಚಿತ್ರವನ್ನು ಬರೆದು ಶ್ರೀ. ರಾಘವೇಂದ್ರರಾಯರು ಸಹಾಯಮಾಡಿದ್ದಾರೆ. ಇವರಿಗೆ ನನ್ನ ಅಭಿವಂದನೆಗಳು ಸಲ್ಲುತ್ತವೆ.

ಈ 'ಬಾಸಿಗ'ವನ್ನು ನಾನು ಕಟ್ಟಿ ಕನ್ನಡತಾಯಿಗೆ ಮುಡಿಸುತ್ತಿರುವೆನೆಂದರೆ ನನ್ನಂಥ ಮರುಳನಾರು? ಕನ್ನಡ ಭಾಗ್ಯದೇವತೆಯು ತಾನು ಕಟ್ಟಿದ ಕಿರಿಯ ಬಾಸಿಗವೊಂದನ್ನು ಇಲ್ಲಿ ನನ್ನ ಕೈಗೆ ನೀಡಿರಬಹುದು. ಈ ಬಾಸಿಗ ಬಲದಿಂದ ನನ್ನ ಕಾವ್ಯಜೀವನವು ಪುನೀತವಾಗಿ ಕನ್ನಡ ನುಡಿಯ ಸೇವೆಯಲ್ಲಿ ತಲ್ಲೀನವಾಗುವುದಾದರೆ ಅದೇ ನಾನು ಬಯಸುವ ಸಾಫಲ್ಯ.

*

೧೪-೯-೧೯೪೦. ರಂ. ಶ್ರೀ. ಮುಗಳಿ.

# ಪರಿವಿಡಿ



## ಅರ್ಪಣ

ಹೊಸಗನ್ನಡದ ಹೆಸರಾದ ಕವಿಗಳೂ
ನನ್ನ ಕಾವ್ಯಗುರುಗಳೂ
ಆಗಿರುವ

**ಶ್ರೀ. ಅಂಬಿಕಾತನಯ ದತ್ತರಿಗೆ—**

# ಬಾಸಿಗ

‘ ಕಟ್ಟಿಯುಮೇನೊ ಮಾಲೆಗಾರನ ಪೊಸಬಾಸಿಗಂ
ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೆ. ’

ಶ್ರೀ. ಮುಗಳಿಯವರ

## ಬೇರೆ ಕೃತಿಗಳು !



| | | | |
|---|---|---|---|
| ಬಾಳುರಿ (ಕಾದಂಬರಿ) | ೦ | ೧೨ | ೦ |
| ಕಾರಣಪುರುಷ (ಕಾದಂಬರಿ) | ೧ | ೦ | ೦ |
| ಸೇವಾಪ್ರದೀಪ (ನಾಟಕ) | ೦ | ೧೨ | ೦ |
| ಪಾವನಪಾವಕ (ನಾಟಕ) | ೦ | ೮ | ೦ |
| ನಾಮಧಾರಿ (ನಾಟಕ) | ೦ | ೧೨ | ೦ |
| ಅಕ್ಕಮಹಾದೇವಿ (ನಾಟಕ) | ೦ | ೮ | ೦ |

ದೊರೆಯುವ ಸ್ಥಳ :

ಮನೋಹರ ಗ್ರಂಥಮಾಲಾ

ಧಾರವಾಡ.

# ನೆನೆಯುವ!

ನೆನೆಯುವ! ನೆನೆಯುವ!
ಅನುದಿನವವನನು ಜೀವಗಳೇ!

ಜೀವನ ಭರದಲಿ
ಆವನ ತೊರೆಯಲಿ
ನಾವೆಯು ನೂಕುತ ನಡೆದಿಹವೊ
ಆವನು ಅಡಗಲು
ನಾವೆಯು ತೇಲುವ
ತೀವಿದ ತೊರೆಯದು ಒತ್ತುವುದೊ

ಭೂಮಿಯ ಬದಿಯಲಿ
ವ್ಯೋಮದ ತುದಿಯಲಿ
ಆಡುವುದಾವನ ಬಿಸುಗುಸಿರೊ
ಸೋಮನ ಸೂರ್ಯನ
ನೇಮದ ನಡೆಯಲಿ
ಸಾಗಿಹುದಾವನ ಹಿರಿ ತೇರೊ

ಆವನು ಇಹನೆಂ-
ಬುವುದಕೆ ತೋರದೆ
ತೋರಿಸುವಾಟವೆ ಹಿರಿಕುರುಹೊ
ಆವನ ಕಂಡಿಹ
ಷೇವದ ಜೀವರು
ಸಾವಿನ ಸೀಮೆಯ ದಾಟಿಹರೊ

ಆವನ ಬಲದಲಿ
ನೋವಿನ ಕಡಲಿನ
ಮೋರೆಯ ಏರುತ ನಡೆಯುವೆವೊ
ಆವನ ನೆನೆಯುತ
ಬಾಳಿನ ಹೆಡೆಯಲಿ
ನಲಿವಿನ ರನ್ನವ ಪಡೆಯುವೆವೊ

# ವಂದನವು !

ವಿಶ್ವವೆಂಬ ಅಶ್ವವೇರಿ
ನಡೆದ ಪರಮಪಥಿಕನಡಗಿ
ಯಿರುವ ನಾವನೇನೆ ಇರಲಿ
ಕಾಂಬ ದಿಟದ ಸೊಮ್ಮು-ಸಿರಿಯೆ
ಪ್ರತಿಹೃದಯಸ್ಪಂದನವು
ನಿನಗೀವುದು : ವಂದನವು !

ಕಣ್ಣು ಅಳಿದ ಮೋರೆ ಹುಳಿತ
ಹೆಣ್ಣು ತಿರುಕಿಯಲ್ಲಿ ಕೂಡ
ಕೂಸು ಕೊಡುವ, ಅಪ್ಪಲೆಂಬ
ಆಸೆಯಿಡುವ, ಮೋಹನೇಹ-
ಶಕುತಿಯಲ್ಲ ವಿಶ್ವದಿಡಿಯ
ಎಳೆತ ಸೆಳೆತ ಬೆರೆತ ತಿಳಿಯ-
ದಗಲ ಜಿಸುಗು-ಜಾಳಿಗೆಯನು
ಅಳಿಯದಳುಕದೊಲವ ಕಂಡು
ಪ್ರತಿಹೃದಯಸ್ಪಂದನವು
ನಿನಗೀವುದು: ವಂದನವು !

ಹಿರಿಯ ಇಳೆಯ ಕಿರಿಯ ಒಂದು
ಕೊಳೆಯ ಮೂಲೆ ಮುಗ್ಗುಲಲ್ಲಿ
ಹೊಲಸು ತಿಂಬ ಹುಳಗಳಿರೆಯು
ಮಲೆತ ನೀರ ಹಸಿಗೆ ಹಸಿದು
ದೋಷವಿಸಿತು ಇಲ್ಲದಂತೆ

## ಬಾಸಿಗ

ರಾಶಿರಾಶಿಯಾಗಿ ಬೆಳೆವ
ಹುಲ್ಲುಹೂವ ಕುಸುರಿನಲ್ಲಿ
ವಿಶ್ವವೃದ್ಧಿಹಟವನರಿತು
ಪ್ರತಿಹೃದಯಸ್ಪಂದನವು
ನಿನಗೀವುದು : ವಂದನವು !

ತಂಪು ತನ್ನ ಬೀಡುಬಿಟ್ಟು,
ನೀರು ಹೆಪ್ಪುಗಟ್ಟಿ ಹೊಳೆವ,
ಜಗದ ತುದಿಯ ಅಣುವಿನಲ್ಲಿ
ಇರುವ ಬಾಳಲೆಂಬ ಜೀವ-
ದಾಹದಲ್ಲಿ ಸರುವ ಲೋಕ-
ದುಳಿವ ಬಯಕೆಗಿರುವ ಕಾವ,
ಅಳಿವು ಬರೆಯೂ ಮತ್ತೆ ಮೊಳೆವ
ಆಸೆ, ಬಲವ, ನಿಲವ ನೆನೆದು
ಪ್ರತಿಹೃದಯಸ್ಪಂದನವು
ನಿನಗೀವುದು : ವಂದನವು !

ಗಿರಿಗಳೆರಡು ಕಡೆಗೆ ನಿಂತ
ತೆರೆದ ತುಟಿಯು ತೆರದ ಕೊಳ್ಳ-
ದಾಳದಿರುವ ಮುರುಕು ಮನೆಯ
ಮೂಲೆ-ದೀವಿಗೆಯಲಿ ಎಲರ-
ತಡೆದು ಉರಿವ ಕೆಂಪು ಮುಂಗುಳಿ-
ನಲ್ಲಿ ಎಲ್ಲ ನೇಮಜಾಲ
ಬಲ್ಲ ನಡೆಸ ಸತ್ಯನಿತ್ಯ-
ನಿಯತಿರೂಪ ನೋಡಿ ನೋಡಿ
ಪ್ರತಿಹೃದಯಸ್ಪಂದನವು
ನಿನಗೀವುದು : ವಂದನವು !

# ಅನಂತಶಕ್ತಿಗೆ

ಊದು ಉಸಿರನು ನಿನ್ನ ಕಾರ್ಯಕೆ ನಮ್ಮನನುಗೊಳಿಸು.
ಬೇರೆ ಬೆಳಕನು ಬೀರಿ ಜೀವರನಿಂದು ಶುಚಿಗೊಳಿಸು.

ನಾವು ಇರುವೆವು ಎಂಬ ಪಂಟಿನ ನುಡಿಯು ಸಾಕಾಯ್ತು.
ಸಾವಿಗಿಂತಲು ಕೀಳು ಈಗಿನ ಬಾಳು ಕೊಳೆಯಾಯ್ತು.

ಇರುತಿಹೆವು ನಿಜ ನಮ್ಮ ಹುಲು ಆಸೆಗಳ ಹಿರಿಗೈದು.
ಸರುವ ಲೋಕದ ಲೇಸು ಬಗೆಯದೆ ನಿನ್ನ ಮರೆಮರೆದು.

ಹೀಗೆ ತೊರೆದರೆ ಹೇಗೆ ಸಾಗುವುದಿಳೆಯು ಜನಜಾತ್ರೆ?
ಒಮ್ಮೆ ಮಳೆ-ಬೆಳೆ ಒಮ್ಮೆ ಹಿರಿಬರವೊಂದೆ ಸಮಯಾತ್ರೆ!

# ಹೊಸಯುಗ

ಹೊಸಯುಗವ ತರಲೇಳು
ಹಸಗೆಡುತಿಹುದು ಬಾಳು.
ಸೂರ್ಯನಾರಾಯಣನೆ
ಸರುವಕಾಧಾರನೆ!

ಹೊಂಬೆಳಕ ಹೊಳೆ ಹರಿಸು
ತುಂಬು-ನಗೆಯನು ಸಿಲಿಸು
ಹರೆಯವೆಲ್ಲಕು ಬರಲಿ
ಚಿರತರುಣತೆಯು ಸಿಲಲಿ

ಮರನೆಲ್ಲ ಹಸುರಿಸಲಿ
ಅರಳುಗಳು ಪಸರಿಸಲಿ
ಗಾಳಿಗಳು ಕಂಪಿಡಲಿ
ಬಾಳಬೇಕೆನ್ನಿಸಲಿ

ಜೀವ ಜೀವದ ಸೊಲ್ಲು
ನಾವು ಒಂದೆಂದೆನಲು
ಜನ ಜನನಿ ಕಂಡಿರುವ
ಕನಸೊಮ್ಮೆ ನಿಜಗೊಳಲಿ

# ಹೊಸ ಜೀವವನು ತುಂಬು!

ಹೊಸ ಜೀವವನು ತುಂಬು, ಕಸವ ರಸಗೈವ ದೊರೆಯೆ!
ಹಸಿ ನೆಲದಿ ಹುಳುವಾಗಿ ಪೊಸೆಯುವುದು ಸಾಕಿನ್ನು!

ಕರೆವ ಕೂಗನು ಕೇಳಿ ಮುಗಿಲನಪ್ಪುವ ಬಲದಿ
ಹರುಷ-ರೆಕ್ಕೆಯ ಪಡೆದು ಹಿರಿದಾರಿಯಲಿ ಪೊರಟೆ;
ಕರೆಯೀಗ ಮರೆಯಾಗಿ ಒಲವೆಲ್ಲ ತಲ ಸೇರಿ
ಅರಿದಾದ ಬಲೆ ಮುಸುಕಿ ಬಲು ಹಲುಬಿ ನೆಲಕಿಳಿವೆ.

ಮೇಲುಮೇಲಕೆ ಹಾರಿ ತಾರೆಗಳ ಬಳಿಸಾರಿ
ಹಾಲು-ಬೆಳಕನು ತಂದು ಜೀವವುಣ್ಣಿಸಲೆಂದೆ;
ಮೇಲು ಅಂತಿರಲೀಗ ಆಸೆ-ಹೆಣ್ಣಿನ ಕಣ್ಣ
ಜಾಲಗಳು ಕೆಳಸೆಳೆದು ತಳಲೋಕಕೆಳೆಯುತಿವೆ.

ನಿನ್ನಿರವು ಒಲವಿನಲಿ ನೀನೆ ನೀ ಒಲವೆಂದು
ಎನ್ನ ಮೈ-ಮನ-ಮಾತು ಒಲವು ವಿಹಾಸಲು ಎಂದೆ;
ಮುನ್ನವೇ ಆ ಒಲವು ಹುಲುಬಯಕೆಯಾಗಿಹುದು
ಇನ್ನು ನಾನಿರಲಾರೆ ಬಾ ಮರಳಿ ಮೈದಾಳು.

# ನಿಂತೆ ನಿಂತೆ!

ಎಂತೊ ಎನಿತೊ ನಿಂತೆ ನಿಂತೆ
ನಿನ್ನ ಮನೆಯ ಬಾಗಿಲಿದಿರು
ಚಿಂತಿಸುವವ ನೀನೆ ಎಂದು
ಸಂತವಿಸುವ ಮನವ ಏಾರಿ

ಕಾಯುತಿರಲು ನಿನ್ನ ಉಸಿರು
ಅರಿತು ಅರಿಯಲಾರದಂತೆ
ನೋಯುತಿಹುದು ಜೀವವೀಗ
ನೀನೆ ಏಕೆ ತೋರೆ ಎಂದು

ಆರಸ ನಿನ್ನ ಕರುಣೆ ಬಲ್ಲೆ
ತಿರುಕನಾಗಿ ಕರೆಯಲೊಲ್ಲೆ
ಅರಿತು ಇದನು ಕರೆವೆ ನಿನ್ನ
ಬರವೆ ಬೇಕು ಬೇಕು ಎಂದು

ಸಾಕು ಒಡೆಯ, ಯುಕುತಿ ಸಾಕು
ನಾಕ ಲೋಕ ಲೀಲೆಗಳಲಿ
ತೋರ್ಪ ಇರವು ಕುರುಹು ಸಾಕು
ಬೇಕು ಮರೆಯುದಿರವು ಆರಿವು

ಮನವು ಸೋತ ಕ್ಷಣವು ಈಗ
ಸಂಬು ಎಂಬ ಗೆಳತಿ ಸರಿಯೆ
ನೆನೆವ ಮೊರೆವ ಜೀವವೊಂದೆ
ಸಸಿಯುದಲ್ಲಿ ಇನಿಯ ಬಾರೊ

# ಜೀವದ ಹೂವು !

ಈ ಜೀವದ ಹೂವ
        ನೀನೆ ಕಾವ, ದೇವ !        ಪ.

ನೀನೂರಿದ ಮರವೆ,
        ನೀನೆ ನೀರೆರೆವೆ.
ನೀನೂದಿದ ಉಸಿರೆ,
        ನೀನೆ ಎಲೆ-ಹಸಿರೆ.        ಅ. ಪ.

ಚಳಿಗಾಳಿಯು ತಿವಿಯೆ,
        ನಿನ್ನ ಇರವರಿಯೆ.
ನೆರವಿಲ್ಲದ ಬಾಳ್ವೆ,
        ಬನ್ನವೆನೆ ಮೊರೆವೆ.
ಹುಳು ಮೈಯನು ಕೊರೆಯೆ,
        ಚೆಂದವಿದು ಹೊರೆಯೆ.
ಹಸವಳಿದಿರೆ ಎಸಳು,
        ನಿನ್ನ ಜಸ ಮುಸುಳು.
ಕರಿಬಂಡುಣಿ ಹೀರೆ,
        ಎನ್ನ ರಸವಾರೆ.
ಬರಿದಾಯಿತೆ ಕರುಣೆ,
        ಚೆನ್ನ ಎನೆ ಸ್ಮರಣೆ.
ಬಹುಜನ್ಮದಿ ಯಾಕೆ,
        ಪೂರ್ಣ ಈ ಮಾಳ್ಕೆ.
ನರುಗಂಪಿದು ಹಾಳೆ,
        ನೀನೆ ನೆರೆ ತಾಳೆ.

# ನೀನೇ ಉಳಿಸು ತಂದೇ !

ಕಳಚುತಿದೆ ಕಟ್ಟಿದಾ ಗುಡಿಯೊಮ್ಮೆ, ನೀನೇ ಉಳಿಸು ತಂದೆ!
ತಳ ನಡಗುತಿದೆ, ಹೊನ್ನ ಹಿರಿಕಳಸ ಕೆಳಕೆಳಗೆ ಬಾಗುತಿದೆ!

ಭಾನು ನೆರೆ ದೀಪಿಸುವ ಹೊನ್ನಹೊಳಪಿಲ್ಲದಲೆ
ಮಣ್ಣಾಮುಸುಡಿಗಳಿನ್ನ ಕಣ್ಣು ಕೊರೆಯುತಿವೆ.
ನೀನೆ ಕೆತ್ತಿದ ದಿವ್ಯ ಮನುಜಮೂರ್ತಿಗಳೆಲ್ಲ
ನಿನ್ನ ಸಣಕಿಪ ಸುಣ್ಣ ಬಣ್ಣವಾಗಿಹವು!

ಹೃದಯಗರ್ಭದಿ ನಿಂತು ನಿಚ್ಚಳದಿ ಕಾಣುತಿಹ
ಪದುಮ ಪೀಠದ ಪ್ರತಿಮೆಯದು ಒಡೆದುರುಳಿದೆ.
'ಅದುವೆ ಶಿಲೆ, ದೈವತದ ನೆಲೆಯೆ ಅದು?' ಎಂದೊದರಿ
ಗದರಿಸುತ ಕೇಳುತಿವೆ ಜೀವಕೋಟಿಗಳು!

ಗಾಳಿಯಲೆಯಲೆಯಲ್ಲಿ ನೆಲೆನಿಂತುದಾಗಿಯೂ
ಬಾಳುವೆಯ ಬಟ್ಟಲದಿ ಬಚ್ಚಿರುವ ಜೇನೇ!
ತಾಳಲಾರೆನು ತಾಳೆ, ಬೀಳುಗುಡಿನೋಟವನು
ಏಳು ಬಾ ಎಲ್ಲೆಡೆಗೆ ನಿನ್ನ ಮನೆ ನಿಲಿಸು!

# ಜಯಂತಿ

ತೊಳಲಾಟದುದರದಲಿ
ತೊಳಗುತಿಹ ಜೀವನದ
ರನ್ನವನು ನೀಸಿತ್ತೆ
ಜಯ ಜಯ ಜಯಂತಿ !

ಅವ್ಯಕ್ತದಾಗಸದಿ
ಆಡುತಿಹ ಆತ್ಮನನು
ಮೈಪಂಜರದಿ ಹಿಡಿದೆ.
ಜಯ ಜಯ ಜಯಂತಿ !

ಸಾವು ಕೈಸೆರೆಯಾಗಿ
ಸಾವು ಮೀರಿದ ದಿವ್ಯ-
ಮಾನವನ ಜನಯಿತ್ರಿ
ಜಯ ಜಯ ಜಯಂತಿ !

ಸೋಲಿನಲಿ, ಗೆಲವಿನಲಿ
ಲೀಲೆಯಿಂದಲಿ ತಂದೆ-
ಯನು ನೆನೆಯುವುದನಿತ್ತೆ
ಜಯ ಜಯ ಜಯಂತಿ !

ಆತ್ಮಶಿಶುವಿನ ಕೂಡ
ಎತ್ತ ಮಲಗಿಹೆ ನೀನು ?
ಬಾಗಿಲನು ತೆರೆಯೇಳೆ.
ಜಯ ಜಯ ಜಯಂತಿ !

ವಂದನವು ನಿನಗವ್ವ
ತಂದೆಯನು ತೋರಿಸೌ
ಇಂದು ಇಲ್ಲವೆ ನಾಳೆ
ಜಯ ಜಯ ಜಯಂತಿ !

## ಅರಿವಿನಾಳದಲಿದ್ದು—

ಅರಿವಿನಾಳದಲಿದ್ದು
ಬರುವನಾತನು ಹರಿಯು
ಹೊರಗಣಂಗಣದಲ್ಲಿ
ಹರಿಯನಾತನು ದೊರೆಯು.

ಕರಣಗಳು ಕೈಮುಗಿದು
ಶರಣುಶರಣೆಂದು ಕರೆಯೆ
ಬರನು ಬರಿಕರೆಯುವುದ
ಅರಿತು ಕೇಳುತಲಿರುವನು.

ಕರಣಗಳು ಕೈಸೋತು
ಮರವಿನಲಿ ಮನ ಮಲಗಿರುತಿರೆ
ಭರದಿ ಬರುವನು ಹರಿಯು
ಒರತೆಯಂದದಿ ಮಳಲಿನಲ್ಲಿ.

ಕರೆದರೂ ಬರನೊಮ್ಮೆ
ಕರೆಯದಿದ್ದರು ಬರನು
ಅರಿಯದಾರಿಗು ಹರಿಯ ಕರುಣೆ.
ಅರಿವನವನೇ ನಮ್ಮ
ಅರಿವಿನೊಳಬಯಕೆಯನು
ಅರಿತದನು ಬರುವ ಝರಿಯಂತೆ.

ಇದನರಿಯದಲೆ ನಾವು
ಇದಿಯೆಂದು ಆಡುವೆವು
ಕದನವನು ಹೂಡುವೆವು ಕಾಣದಾ ಹಗೆಯೊಡನೆ.
ಅದುವೆ ನಮ್ಮಯ ಬಯಕೆ
ನದಿಯವೊಲು ಕುಣಿದು ಬರೆ
ಅದು ಎನಿತು ಹರಿಯ ದಯೆಯೆಂದಾಡಿ ಹಿಗ್ಗುವೆವು.

# ಮೀನಗಾರನಿಗೆ

ಏ ಮೀನಗಾರನೇ, ನೀನೆತ್ತಬೇಡೊ!
ಸೌಂದರ್ಯಸಾಗರದಿ ನಾ ಮಿಂದು ನಲಿವೆ.

ಆಮಿಷದ ಕೀಳುಹುಳದಾಸೆಯನು ಹಚ್ಚಿ
ಕಾಮಿಯೊಲು 'ಆ'ಯೆಂದು ಬಾಯ್ತೆರಸಬೇಡೊ.

ಯಾವಾಗಲೂ ನಿಲದೆ ನಾ ಸುಳಿವೆ ನಲಿವೆ
ಯಾವಾಗಲೂ ಅನಿಮಿಷನು ಆಗಿ ಸಾಗಿ.

ನಿತ್ಯವೂ ತೆರೆದಿರುವ ಸಿರಿಗಣ್ಣನಿತ್ತೆ
ನಿತ್ಯವಾಗಿಯು ನಡೆವ ಜೀವನವನೀಯೊ.

ಮೋಹಮಾಟಗಳಿಂದ ಸಾವಸೆರೆತರುವ
ಜಾಳಿಗೆಯ ಬೀಸಾಡಿ ಜೀವ ಕೊಳಬೇಡೊ.

ಓಲಾಡುತಿಹೆನು ಹಿರಿಹಿಗ್ಗಿ ನಾನಿಲ್ಲಿ
ಜಾಲದಲಿ ಹಿಡಿದೆನ್ನ ನಡೆ ತಡೆಯಬೇಡೊ.

# ಕವಿಗಳ ಮಾತು

ದೇವನಾದೇಶವನು ಪಡೆಯುದಲೆ
ನಾವು ನಡೆಯೆವು ನವಿನುಡಿಯ ಹಾದಿಯಲ್ಲಿ.
ಭಾವನೆಯ ದೇವದೂತನು ಕರೆಯೆ
ನಾವು ನಡೆವೆವು ನವಿನುಡಿಯ ಕೆಜ್ಜೆಯಲ್ಲಿ.

ಜನವೆಂಬ ನಾಡರಸಿ ತನ್ನ ನವಿ-
ಯೊಸಗೆ ಬೀರುವ ಬೇಹಿನಾಳುಗಳ ಕಳುಹಿ
ಹಸವೆತ್ತ ಮುಕುಟವನು ಸಲ್ಲಿಸೆಯು
ವಶವಾಗದಾವು ನಡೆವೆವು ನಮ್ಮ ಪಥದಿ.

ಅನಳು ತಾನೆಯೆ ಬಂದು ನಮ್ಮ ಚೆಲು-
ಕವನಗಳ ಕಾಲರಥದಲ್ಲಿ ಸಾಲಿರಿಸಿ
ನವಿಗಾತಿ ಮೆರಸಿದರೆ ಮೆರಸಬಹುದು
ನಾವು ನಡೆವೆವು ನಮ್ಮ ನಿಜದಾರಿಯಲ್ಲಿ.

ಸತ್ಯಸೌಂದರ್ಯವಾನಂಡ ಸಂ-
ಪ್ರೀತಿ ನಿಜಕಲೆಯು ಗಾರುಡಿಯೆಂಬರಿವರು
ಈ ತೆರದಿ ಐವರೂ ಚೆಲುವೆಯರು
ನಿತ್ಯ ನಡಸುವರೆಮ್ಮ ಕೈಸನ್ನೆಯಿಂದ.

ನಾವು ನಡೆವುದು ದೇವನಾಜ್ಞೆಯಿದು
ನಾವು ಪಡೆವುದು ದೇವನಾನಂದಲಹರಿ.
ನಾವೆಂಬುವುದು ಸುಳ್ಳು, ಬರಿಮಾತು;
ದೇವನೇ ಈ ಎಲ್ಲ ಕವನಗಳ ಬರೆವ!

# ಕಬ್ಬ ಹಣ್ಣು

ಕಬ್ಬದೋಟದ ಎರೆಯು
ಮನಸವೆನಿತು ಮಡಿಮಾಡಿ
ಎತ್ತಲೂ ಸಾಲಾಗಿ
ಬಿತ್ತಿ ಬೀಜದ ರಾಸಿ
ಹಗಲೆಲ್ಲ ನೀರುಣಿಸಿ
ಇರುಳಲ್ಲಿ ಪವಡಿಸಿರೆ—

ಬೆಳಗಿನೆಳಗಾಳಿಯಲಿ
ಜಿನುಗುದೇರನು ಏರಿ
ತಾನೆ ತಾ ಮಾಮೈಮ
ಬಂದೊಡನೆ ಮುದ್ದಿಟ್ಟು
ಹೊಂದಿಸದೆ ಜೀವಕಳೆ-
ಯೆಂದಿಗೂ ಮರೆಯಾಗೆ—

ಬೀಜ ತಾ ಮೊಳೆಯಾಗಿ
ಬೆಳೆಯಾಗಿ ಕಾಯಾಗಿ
ಕಳೆಗೊಂಡು ರಸದುಂಬಿ
ಕೈಸಾರುವುದೆ ಕಬ್ಬಹಣ್ಣು?

# ಕಾವ್ಯದೇವಿ !

ಒಬ್ಬಳೇ ಬರಬೇಡ
ಕಾವ್ಯದೇವಿ !
ಮಬ್ಬು ಮುಸುಕಿದ ಎನ್ನ
ರಾಜ್ಯದಲ್ಲಿ.
ಗರ್ಭಶ್ರೀಮತಿ ನೀನು
ಕಲೆಯ ಕನ್ನೆ
ಸಿಕ್ಕಸಿಕ್ಕೆಡೆಯಲ್ಲಿ
ಸುಳಿಯೆ ರನ್ನೆ
ನನಗೆನ್ನ ಅರಮನೆಯೆ
ಕಾಣದಿರುವೆ.
ಅರಸು ನಾನೆಂಬುದೂ
ಅರಿಯದಿರುವೆ.
ನನ್ನ ಬಗೆನಾಡವರು
ಕೂಡಿ ಇರರು.
ತಮ್ಮ ಕಲಹದಿ ನನ್ನ
ಕೊಲದೆ ಇರರು.
ಬೇಡ ತಾಯೇ ಇಂಥ
ಬಡವನೆದೆಯ
ಕಾಡು-ಬೀಡಿಗೆ ಬರುವ
ಸಾಸ ಬೇಡ.
ಬರುವ ಸನ್ನೆಯ ಕೂಡ
ತಿಳುಹಬೇಡ

ಅರಿಕೆ ಸುಡಿಯಾಳುಗಳ
ಕಳುಹಬೇಡ.
ನೀನು ಬರುವುದ ಕೇಳಿ
ಎದೆಯು ನಡುಗು !
ಗತಿಗಾಣದಿರವು ಮನೆ-
ಬುಡದ ನಡುಗು !
ನೀನೆನ್ನ ನಲ್ಗಾಯಿ
ಅದನು ಬಲ್ಲೆ
ಆದರೀ ಸಮಯದಲಿ
ಸೊಗಸೆ ಇಲ್ಲೆ.
ಹೇಳಲೇ ದೇವಿ ಒಳ-
ಬವಣೆಗಳನು
ತಾಳೆನೇ ನನ್ನೊಡೆಯ-
ನಗಲಿಕೆಯನು
ಅವನ ಕಾಣದ ಚಿತ್ತ
ಕತ್ತಲೆಯಲಿ
ಅದ್ದಿ ಮಾಡಿದ ಮುದ್ದೆ
ಬಿತ್ತರದಲಿ
ಅಂತೊಬ್ಬಳೇ ಬೇಡ
ಇನ್ನುಮುಂದು
ಬಂದರೇ ಬಾ ದೇವಿ
ಬೆಳಕು ತಂದು.

# ಮೂರು ಹೂವು

ಮಲ್ಲಿಕಾ ಬಕುಲ ಚಂಪಕಾ
ಸಾಕು ನನಗಿಸಿತೆ ಈ ಸುಕಾ!
ಇಲ್ಲಿ ನಾ ಸಕಲ ಶಾಂತಿಯಾ
ಉಂಡೆ ಕೈವಲ್ಯಕಾಂತಿಯಾ
ಎಲ್ಲ ಈ ಜಗವನಳಿಯಿಸಿ
ಹೂವ ಸೌರಭ್ಯವುಳಿಯಿಸಿ
ದೇವ ತಾ ಮರೆಯೆ ಆದರು
ಅವನ ಕಾರುಣ್ಯ ಹೋದರು
ಮಲ್ಲಿಕಾ ಲತೆಯ ಮನೆಯಲಿ
ಮೊಗ್ಗೆ ಹೂವುಗಳ ನೆರಳಲಿ
ಚಂಪಕಾವಳಿಯ ಹಸೆಯೊಳು
ಬಕುಲಮಾನಿನಿಯ ಕೆಲದೊಳು
ಸಿಕ್ಕುವಾ ನಲಿವನುಣ್ಣುವೆ
ಸಿಡಿಲನೂ ಸವಿಯ ಮಾಡುವೆ.
ಅಲ್ಲವೋ ಬರಿಯ ವಾಸನೆ
ಅಲ್ಲ ಬರಿ ಕಣ್ಣ ಪಾರಣೆ.
ಜೀವ ಚೆಲುವೆನುವ ಗೆಳೆಯರು
ಸಾವುಮೈಯುಳಿದ ಎಳೆಯರು
ಗಾಳಿಮಂಚದಲಿ ಬೆರೆಯುತ
ಬೇರೆಯೆಂಬುದನು ಮರೆಯುತ
ಹಿಗ್ಗಿನಾ ತುದಿಯನೇರುತ
ಹೊಂದಿದಾ ಸವಿಯ ಅಮೃತ
ಸಖ್ಯದಾ ಕಂಪು ಗಮಗಮ!
ನಿತ್ಯ ಯಾತ್ರಿಕರ ಸಂಗಮ!

# ಸಂಪಗೆಯೆ !

ಸಂಪಗೆಯೆ ! ನನ್ನೆದೆಯ
ಸಂಪ್ರೀತಿಯುಲರೊಡನೆ
ಪಂದುವೆಯಾಗುವೆನೆಂದು
ವಧುವಾಗಿ ನೀ ಬಂದು
ಮಿಂದುಹಳದಿಯುಸು ಧರಿಸಿ
ಮಂದುಮಂಗಳ ಮಾಟದಲಿ
ತುದಿಗೈಯ ವೇದಿಕೆಯ
ಬದಿಯಲ್ಲಿ ಕುಳಿತಿರಲು
ಅದುವೆ ನಿನ್ನಧರದಲಿ
ತನಿವ ಕೆಂಪನ್ನ ಕಳೆಯು !

'ಎದೆಯಾಣ್ಮ ಬರಲಿಲ್ಲ
ಆದೆನಿಕೋ ನಾ ನಿಲಲಿ'
ಎಂದೆನ್ನ ನಯನಗಳ
ಮಂದಿರವ ನೋಡುತಲಿ
ಕನಲಿಯಿರೆ ಸಂಪಗೆಯೆ
ಮನದಿ ನೀನೆನ್ನ ಮನಕೆ,
ಕೆನ್ನೆಗಳ ಮೇಲೆಲ್ಲ
ಬನ್ನದಲಿ ಬೆಳೆಯಿತೇ
ಅದುವೆ ನಿನ್ನಧರದಲಿ
ತನಿವ ಕೆಂಪನ್ನ ಕಳೆಯು !

## ಬಾಸಿಗ

ಬೇಡ, ಅಳುಕಲು ಬೇಡ
ಬಾಡಿ ಬಳುಕಲು ಬೇಡ
ಪಡೆದವರ ಮುಡಿಯಿಂದ
ಬಿಡಿಸಿ ತಂದಿಹೆನೆಂದು;
ಮಡದಿಯಾದವಳಿಂಗೆ
ಒಡನಾಡಿಗಳು ಇಲ್ಲ,
ಮುಡಿವನೊಬ್ಬನೆ ಒಡೆಯ
ಮುಡಿಸುವಳು ನೀನೊಡತಿ
ತಿಳಿಯದಲೆ ಇದು ತರಳೆ
ಕೆರಳಿರುವೆ ನೀ ಮುಗುಳೆ
ಅದುವೆ ನಿನ್ನಧರದಲಿ
ತನಿವ ಕೆಂಪನ್ನು ಕಳೆಯು !

ನೇಹದಿನಿಯನು ಬರುವ
ಸ್ನೇಹದ್ವಾರವ ತೆರೆವ,
ಅಂಗೈಯ ಪದ್ಮದಲಿ
ಶೃಂಗಾರ ಪೀಠದಲಿ
ಮೇಲೆ ನೋಡದೆ ಕುಳಿರು
ದಾರಿ ಕಾಯುತ ಕುಳಿರು
ಮುಚ್ಚಿ ಮುಕುಲಿತವಾದ
ನಾಚಿಕೆಯ ನೈದಿಲೆಯೆ !
ಮೆಚ್ಚಿಸುವ ಸಂಪಗೆಯೆ !
ಹೆಚ್ಚಳವದೇಕಿದೆಯೆ ?
ಅದುವೆ ನಿನ್ನಧರದಲಿ
ತನಿವ ಕೆಂಪನ್ನು ಕಳೆಯು !

# ಲೀಲೆ

ನನ್ನ ಕೈಬೆರಳುಗಳ
ಸಂಪಗೆಯ ಅರಳುಗಳ
ಮಾಡೆಂದು ಎನ್ನ ಮಾಡಿದವಂಗೆ ಬೇಡುವೆನು;
ಮಾಡದಿರೆ ಹಾಗೆಂದು ನಾನೆ ನಾ ತಿಳಿಯುವೆನು.

ಮೂಗು ಸಂಪಗೆಯಾಗೆ
ಮೂಸಿ ನೋಡೆನು ಆಗ
ವಾಸನೆಯು ವಾಸನೆಯ ಮೂಸಿ ನೋಡುವುದೆಂತು ?
ನಾಸಿಕವು ನಾಸಿಕವೆ ಆಗಿರಲಿ ಅದಕಿಂತು.

ಬೆರಳು ಸಂಪಗೆಯಾಗಿ
ಚೆಲುವಿಕೆಯ ನೆಲೆಯಾಗೆ
ಕರವ ಮುಟ್ಟಿದಡೆಲ್ಲ ಕಂಪು ಬೀರುವುದಲ್ಲ !
ಹೆರವರೆನ್ನುವರು ಕರೆಕರೆದು ಕಾಣುವರಲ್ಲ !

ಬೆರಳು ನಸುಬಾಡದಿಹ
ಹೊಸ ಹೂವು ತೆನೆಯಾಗೆ
ತಮ್ಮ ನಿಜವನು ಅರಿತು ಮಾಮೈಮನನು ಲೀಲೆ-
ಯಾಣ್ಮನನು ನೆನೆಯುವವು ಕೈಮುಗಿದು ನೋಡಿ ಮೇಲೆ !

# ಮಂದಾರ ಹೂವಾ !

ಬಂದಾರ ತಂದಾರ ಮಂದಾರ ಹೂವಾ
ಇಂದ್ರಽನ ನಂದನದ ಪೂವಾಡಗಿತ್ತೇರು,
ಒಂದಾರ ಕೊಳ್ಳೀರೊ ಮಂದಾರ ಎಂದು
ಅಂದಾರ ಇಂದ್ರಽನ ನಂದನದ ಚೆನ್ನೇರು.

ಅಂದಾದ ಅಂದೂಗಿ ಒಂದಾಗಿ ಬಂದು
ನಿಂದಾರ ಗಿಲಿಗಿಲಿಯ ನಾದದಲಿ ನೀರೇರು,
ಒಂದಾರ ಕೊಳ್ಳೀರೊ ಮಂದಾರ ಎಂದು
ನಿಂದಾರ ನಂದನದ ಪೂವಾಡಗಿತ್ತೇರು.

ವಾಸಽವ ರಾಯುಽನ ಹಿರಿಹೂವು ಎಂದು
ದೇಶಽವ ತಿರುಗಿದರು ಪೂವಾಡಗಿತ್ತೇರು
ವಾಸಽವ ನೋಡಿಕ್ಕಿ ಬಿಡುವಽರು ಹೂವಾ
ಲೇಸೆಂದು ಕೊಳ್ಳುಽವರ‍್ಯಾರಿಲ್ಲೊ ಜಗದಾಗ.

ಮುನಿದಾರ ಮನದಾಗ ತಿಂದಾರ ಹಲ್ಲಾ
ಮಂದಾರ ಹೂವೀನ ಪೂವಾಡಗಿತ್ತೇರು
ತಂದಾರ ಅಂದಾದ ಮಂದಾರ ಹೂವಾ
ಬಂದಾರ ಸುರುವ್ಯಾರ ನಂದನದ ಕೇರಿಯಾಗ.

ಅಂದಾರ ಇಂದ್ರಽನ ಬಳಿಗೋಡಿ ಹೋಗಿ
" ಮಂದಾರ ಹೂವನು ಒಂದಾರ ಕೊಳಲಿಲ್ಲ
ಒಂದಾರ ಕೊಳಲಿಲ್ಲ ಲೋಕಽದ ಮಂದಿ
ನಿಂದಾವ ಲೋಕಽದ ಬಲುಹೂವು ಎಂದೇನೊ ! "

# ಬಿದಿಗೆ ಚಂದಿರ

ಬಿದಿಗೆ ಚಂದಿರನಿಂದು
ಉದಯವಾದನು ನೋಡು
ಹೃದಯವೇ! ಕದ ತೆರೆದು
ಹೊರನುಗ್ಗಿ ಬರಮಾಡು.
ತಿಳಿಯ ಬಿಳಿತೋರಣದ
ಕಳೆಯ ತಿರುಳನು ಹೀರು
ಬಳಲಿ ಬೆಂಡಾಗಿರುವ
ಒಳಹೊರಗುಗಳಲಿ ಬೀರು.

ಹೊಚ್ಚ ಹೊಸತಿಂಗಳಿನ
ಹೊಸತಿಲದಿ ಮೈದೋರಿ
‘ಹೆಚ್ಚುವುದು ಹೊಂಬೆಳಕು
ಹೊಸಗೈದು ಬೆಳಗಿಪುದು
ಕಾರಿರುಳ’ಸೆಂದೀಗ
ಬೆಳಕು ನಾಡಿನ ಲಕ್ಷ್ಮಿ
ಸಾರುವಳು ಎಳಶಶಿಯು
ಬಿಳಿಯ ಕಾಳೆಯನೂದುತ.

ಹುಣ್ಣಿಮೆಯು ಬರಲಿ ಬರ
ದಿರಲಿ ಮೊದಲಿರುಳ ಈ
ಸಣ್ಣನೆಯ ಗೆರೆ ಕೊರೆದ
ಹಿರಿಮೆಯನು ತಣಿಗಂಡ
ಬಿಳಿಯ ಚುಕ್ಕಿಯ ಹಾ!
ಬಿಲ್ಲು ಬೆರಗಾದ ಬಗೆ
ಕಳೆಗೊಂಡು ಮೇಲೇರಿ
ಚೆಲ್ಲುದಲಿಯಿಸುತಿಹುದು

ಏನು ಈ ಬಿಳಿಬೆಳಗಿ-
ನವತಾರ! ಬಾಂದಳದಿ
ಏನೆಂಥ ಕಿರಿದರೊಳು
ಹಿರಿಚೆಲುವು! ಕೊಂಕು-ಸಾ!
ದೇವಶಿಲ್ಪಿಯು ತನ್ನ
ನೆಲದೆಲ್ಲ ನಿರ್ಮಿತಿಗೆ
ಚಿಕ್ಕಗಣ್ಣಳ ತೆರೆದು
ನಕ್ಕ ನಗೆಯುಂಗುಳಂತೆ ತೋರುತಿಹುದೊ!

# ಬಂದೆಯಾ ಬೆಳದಿಂಗಳೆ !

ಎಂದಿನಿಂದಲಿ ಕರೆದು
ನೊಂದು ಸುಯ್ಗರೆಯುತಿರೆ
ಇಂದೆನ್ನ ಅಂಗಳದಿ
ಬಂದೆಯಾ ಬೆಳದಿಂಗಳೆ ಪ.

ಅಂದದೊಡತಿಯು ಕೊಡದೆ
ಹಿಂದೆ ಮರೆಮಾಜಿದಾ
ಮಂದಹಾಸದ ನೆರವಿ-
ತಂದು ತಿಳಿಬಿಳಿಯಾಗಿ.

ತೋರಿ ನೀರಿನ ಭಾರ
ತೋರಗತ್ತಲೆ ಕವಿಸಿ
ಸಾರುತಿರೆ ಈವರೆಗೆ
ನೂರು ಮೋಡದ ಸಾಲು.

ಕಳೆದುಕೊಂಡಿರೆ ನಾನು
ಕಳೆಯು ಕೆಂಗದಿರನನು
ಪ್ರಳಯದಿರುಳಲಿ ಮಿಣುಕು-
ಹುಳದಂತೆ ಹಲುಬುತಿರೆ.

ತಾನೇಕೊ ನಿದ್ರಿಸುವ
ಚೆನ್ನ ಚೆಲುವಿನ ಹಿರಿಯು
ಕಣ್ಣೀಗ ತೆರೆದೊಮ್ಮೆ
ಮಣ್ಣ ಹೊನ್ನಾಗಿಸಲು.

# ಮರೆಯಾಗದಿರು ಚಂದ್ರಾ !

ಕರೆಕರೆದು ಕಾಡಿಯೂ
ಬರುವಿ ನೀ ತುಸುವೆಯೆ
ಹಿರಿಮುಗಿಲ ಹರಹಿನಲಿ
ಮರೆಯಾಗದಿರು ಚಂದ್ರಾ !   ಪ

ತೆರವಾಗಿಹುದು ಜೀವ
ಮರಳಿ ನೆರೆ ತುಂಬುವುದು
ಸುರಿಸುರಿದು ನೀನೀವ
ಸರುವ ನೀ-ಸೋನೆಯನು.

ನಿನ್ನ ಜೊನ್ನಕೆ ನಲಿವು
ತಾನಾಗಿ ಮುಗಿಲೇರಿ
ನಿನ್ನಿದಿರು ಹಾಡದೇ
ತನ್ನನನ ಎನೆತೆನುತ ?

ಮರುಬುವಿಯು ಮರೆಯಿಸುತ
ಮರುಳಿಸುವ ಮೋಡಿಮನೆ-
ನಿಲಿಪಳವು ನಿನ್ನಯಾ
ಕಿರಣಮಂತ್ರದಲಿಹುದು.

ಬೆಳಕು ನುಂಗುತಲಿರುವ
ತೆಳುಮೋಡ ಕರಿಮೋಡ-
ಗಳನೆಲ್ಲ ಕಳುಹಿಬಿಡು
ಉಳಿಯಯ್ಯ ತಿಳಿಯಾಗಿ.

# ಚಂದ್ರಹಾಗೆಯೆ !

ವರುಷವೆಂಬ ಪರುಷ ಹೊಂದಿ
ಹರುಷ ಹೊಳೆದು ನಿಲುವ ಹಾಗೆಯೆ
ಮುಗಿಲ ನಡುವೆ ಮೊಗವ ಚಾಚಿ
ನಗುವ ನಲಿವ ಚಂದ್ರ ಹಾಗೆಯೆ !

ನೀರುಹನಿಯ ಭಾರವಾಂತು
ಸಾರೆ ಮೋಡವವನ ಕೆಳದಲಿ
ಕಳೆದು ಕರೆಯ ಬಿಳಿದು ಬರೆದು
ಕಳುಹುತಿರುವ ಬಾನಬಯಲಲಿ.

ದಿನದ ತಂದೆ ಬಿನದವಿರದೆ
ಕುನುಗಿ ಅಡಗಿ ಇರುವ ಕಾರೊಳು
ಮಿಗಿಯೆ ಇರುಳ ಹಗಲು ತಾನು
ಹಗಲುಗೊಳಿಪ ಹಿರಿಯ ಇರುಳನು.

ನೆಲದಿ ಹಿಂದೆ ನಲಿದ ಜೀವ
ತುಳಿದು ನೋವ, ನಕ್ಕ ನಗೆಯನು
ಬಿಗಿದು ತನ್ನ ಮೊಗದಿ ಈಗ
ನಗುವನದನೆ ಚಂದ್ರ ನಗೆಯನು !

# ಕಿರಣ-ರಾಣಿ

ಹೊಳೆವ ನೀರಮೇಲೆ ಕುಣಿವ
ಬೆಳದಿಂಗಳ ಕಿರಣರಾಣಿ!
ಕುಣಿದು ಕುಣಿದು ದಣಿಯದಿರುವ
ನಿಚ್ಚ ನಗೆಯ ತವರು ಜಾಣಿ!

ಸೂರ್ಯಲೋಕದಿಂದ ಬಂದು
ತಂಪು ಬೀಡು ತಿಂಗಳಸಲಿ
ಕುಣಿತ ಕಲಿತು ಇಳೆಗೆ ಇಳಿದ
ಬೆಳದಿಂಗಳ ಕಿರಣರಾಣಿ!

ನೀರ ರಂಗದಲ್ಲಿ ನೆಲಸಿ
ತೆರೆಯ ತಾಳದೊಡನೆ ಬೆರೆತು
ನೀಲನಭದ ತಾರೆ ನೀರೆ
ನೋಡುತಿರಲು ಕುಣಿವ ರಾಣಿ!

ಎಲ್ಲ ಕಡೆಗು ತುಂಬಿ ತುಳುಕಿ
ತೆರವು ಎಂಬ ತೆರದಿ ತೋರಿ
ನಂಬುವವರ ನಲ್ಮೆಕಾಂಬ
ಹಿಗ್ಗು-ಕಡಲ-ಕುರುಹು ಜಾಣಿ!
ಬೆಳದಿಂಗಳ ಕಿರಣರಾಣಿ!

# ಕಾಮನ ಹುಣ್ಣಿವೆ !

ಕಾಮು ! ಇದು ನಿನ್ನ ಹುಣ್ಣಿವೆಯಂತೆ ! ಬೀದಿ ಬೀ-
ದಿಗೆ ನಿನ್ನ ಬೆಂಕಿ-ಬಾಯಿಗೆ ಕೊಟ್ಟು ನಿನ್ನ ಸಾ-
ವಿನ ಹರುಷ ಹುಚ್ಚಿನಲಿ ಬೊಬ್ಬಿರಿವ ದಿನವಂತೆ !
ಅಯ್ಯೋ ಅಣಕಾಟವೇ ! ನೀನೆಂದರರಿಯದ
ಪಿಳ್ಳೆಗಳು ಮನೆಮನೆಗೆ ಅಲೆದಾಡಿ ಕುಳ್ಳು-ಸೊದೆ-
ಗಳ ತಂದು ಕಿಳ್ಳಿಕೇತಾಟದಲಿ ಕಲೆಹಾಕಿ
ಕೊಳ್ಳಿಯನು ಇಕ್ಕಿ ಕೆಂಪುರಿಯು ಕಿಡಿಗೆದರುತಿರೆ
ಬೊಬ್ಬಿಟ್ಟು ಕೂಗಾಡಿ ತೂಗಾಡಿ ತೆರಳಿರಲು
ನೀನುಳಿವೆ ಎಂದಿನೊಲು ಎಲ್ಲೆಡೆಗೆ ತುರುತುರುಗಿ
ಗಾಳಿಯೊಲು ಜಿನುಗಾಗಿ ಜೀವನಕೆ ಉಸಿರಾಗಿ
ತಂಪು ತೀಟದಿ ಒಮ್ಮೆ ಸೊಂಪು ಸವಿಯನು ಬೀರಿ
ಒಮ್ಮೆ ಸುಂಟುರೆಯಾಗಿ ಸುಳಿಸುಳಿದು ಜೀವಗಳ
ದೂಳಿಕಣಗಳ ಹಾಗೆ ತೂರಾಡಿ ತುಳಿದೊಗೆದು
ಸುಟ್ಟೆವೆಂಬರ ಮೆಟ್ಟಿ ಮೆರೆವೆ ಲೋಕೈಕವೀರ !
ಸತ್ಯವಿದು ನಿನ್ನ ಹುಣ್ಣಿವೆ ! ನಿನ್ನ ಸುಡುತಿಹೆವು
ಎಂಬುವರ ನೀ ನೋಡಿ ನಗುವ ನಗೆ-ಹುಣ್ಣಿಮೆಯು !

# ಎಳಹಕ್ಕಿಯೆ !

ಮನೆಯ ಸನಿಯದ ಮಾವು ಮರತುದಿ-
ಯಲ್ಲಿ ಸಂಜೆಯ ಎಳೆಯ ಗಾಳಿಯು
ತೂಗುತಿಹ ಸೆಳೆಗೊಂಬಿನುಯ್ಯಾಲೆ
ಯೇರಿ ಹಸುರೆಲೆ ಗೊಂಚಲಿನ ನಡು ನಲಿವ ಎಳಹಕ್ಕಿಯೆ !

ತಿಳಿಹಳದಿ ತುಪ್ಪುಳದಿ ನುಣುಪನು
ತುಂಬಿರುವ ಈ ನಿನ್ನ ಮೈಮನೆ-
ಮುಂದಿರುವೆರಡು ಬೆಳಕು-ಕಿಂಡಿಗ-
ಳಂತೆ ಕರಿ-ಕಿರಿದಾದ ಕಣ್ಣುಗಳೆನ್ನ ನೋಡುತಿವೆ.

ಯಾರು ನೀ ? ಎಲ್ಲಿಂದ ಬಂದೆಯೆ ?
ಸಾರಿದರು ಹತ್ತಿರಕೆ, ಹಾರದೆ
ತೂಗಿ ಮೈಯನು ನಲಿವ ಕೆಳದಿಯೆ !
ನಿನ್ನ ನೋಟದಿ ಎನ್ನ ನೋಟವು ಬೆರೆತು ನಿಂತಿಹುದು.

ದಿನದಿನವು ನೂರೆಂಟು ಎಣಿಕೆಯ
ತೂಗಿನುಯ್ಯಾಲೆಯಲ್ಲಿ ಸಿಲುಕಿದ
ಎನ್ನ ಈ ಬಗೆ ಬಯಸುತಿದೆ 'ಮಾ-
ನಸಿಕೆ ಹೊರೆಯನು ಕಳಚಿ ಹಕ್ಕಿಯ ಹಗುರು ಮೈಝುಲಿಯೆ
ನಿನ್ನ ಹೊಂದಿಯೆ ಕುಳಿತು ಕಡೆವರ ತೂಗಿ ತೂಗುವೆನೆ ! '

# ಹೊಸಕಾಲದ ನವಿಲು

ಮನದಣಿ ಕುಣಿಯುತ ಕೇಕೆಯ ಹಾಕುತ
ಮರಡಿಯ ಮೇಲಣ ಹಸುರಲಿ ಹಾರುವ
ಹೊಸಕಾಲದ ನವಿಲು.

ಬೇಸಗೆ ಬೇಗೆಯು ಹಳೆಯದನೆಲ್ಲವ
ಸಾಸಿರ ನಾಲಿಗೆಯಿಂದಲಿ ಸವರಲು
ಪೂಸಿ ಎರೆಯಲಿಳೆ-ತಾಯಿಯ ತವಕದಿ
ಸಾಸಿರ ರೂಪದಿ ಕಾರಿನ ನೀರೆಯು
ಬೇಗದಿ ಬಂದಿರಲು
ಕುಣಿವುದು ಹಗಲಿರುಳು
ಹೊಸಕಾಲಗ ನವಿಲು.

ಬಂದಿತು ಮಳೆಗಾಲವು ಅಳಿಗಾಲವು
ಬಂದಿತು ಎನ್ನುತ ಬನದೊಳಗಿನ ದ್ವಿಜ-
ವೃಂದವು ತಾವೇ ತಾವೆಯೆ ಮಾಡಿದ
ಬಂದಿಯ ವಾಸವನೊಡನೆಯೆ ಸೇರಲು
ಒಂದೇ ಒಂದೆಯುದು
ಸಿಂದಿದೆ ನೊಂದದೊಲು
ಹೊಸಕಾಲದ ನವಿಲು.

## ಹೊಸಕಾಲದ ನವಿಲು

ಮೆರೆದೆವು ಮಾಸದ ಬೇಸಗೆ ಬಿಸಿಲಲಿ
ಪೊರೆದೆವು ಜಗವನು ನೆಳಲಿನಲೆಸ್ನುತ
ಹಿರಿತನದಿಂದಲಿ ನಿಂತಿಹ ಮರಗಳು
ಸಿರಿಯನು ಬಿರಿಯುವ ಬಿರುಮಳೆ ಬಂದಿರೆ

ಅತಿ ಅತಿ ಅದುರಿರಲು
ತನನನ ಉಲಿವುದಿದು
ಹೊಸಕಾಲದ ನವಿಲು.

ಪಸೆಯನು ತಂದಿತು ಸಸಿಯನು ತೋರಿತು
ಪೊಸಪೊಸ ಹೂಗಳ ಕಣ್ಣನು ತೆರೆಯಿತು
ಕಸುಕಿನ ನೆಲದಲಿ ಹಸುರನು ಹಾಸಿತು
ಪೊಸಕಾಲವಿದೆಂದಾಸಂಗದಲಿಯೆ

ಮೈಮರೆಯುತ ಸುರುಳು
ಕುಣಿವುದು ಹಗಲಿರುಳು
ಹೊಸಕಾಲದ ನವಿಲು.

ಕೊಳೆತಿಹ ಹುಳಿತಿಹ ಕಂದಿಹ ಕಮರಿಹ
ಹಳೆಯುದ ಕುಲವನು ಗಳಮನೆ ನುಂಗಲು
ಮುಳಿಮೋಡದ ರಕ್ಕಸರೈದಿರುತಿರೆ
ಸೆಳೆಮಿಂಚಿನ ಹಲ್ಲುಗಳಾಡಿಸುತಿರೆ

ನಲಿವುದು ಹಗಲಿರುಳು
ನಿಲುವುದು ದಣಿಯದೊಲು
ಹೊಸಕಾಲದ ನವಿಲು.

## ಬಾಸಿಗ

ಬಾನಿನ ಬಯಲೊಳು ನಡೆದಿಹ ಬವರದಿ
ಕಾಣದ ಗ[illegible]ನ ಗುಟ್ಟನು ಕಂಡೊಲು
ಮಾಣದ ವೈಭವವಾದ್ಯವು ಎಂದೋ
ತಾನೆಯೆ ಹೊಸನಾಡಿನ ದೊರೆಯೆಂದೋ

ತಲೆಯಲಿ ಕೊಡೆಯಿರಿಸಿ
ನಲಿವುದು ಹಗಲಿರುಳು
ಹೊಸಕಾಲದ ನವಿಲು.

ಮುಗಿಲದು ನಸುನೆಯೆ ತನ್ನಯ ಮುಸುಕನು
ತೆಗೆದೊಗೆದೊಳ್ಳಿಯ ನೇಸರ-ನಗೆಯಲಿ
ಝುಗಝುಗವಿರುತಿರೆ ಬಿಂಕದ ಗರುಪಿನ
ಬಗೆಬಗೆ ಬಣ್ಣದ ಗರಿಯನೆ ತೆರೆಯುತ

ಮೆಲ್ಲನೆ ಒಗೆಯುವನು
ತಾಲದಿ ಕಾಲ್ಗಳನು
ಹೊಸಕಾಲದ ಸಖನು.

ಗರಿಯಲಿ ಬಗೆಬಗೆ ಬಯಕೆಯ ಹರಹುತ
ಗರುವವ ನಡುವಿನ ಪೊಡೆಯಲಿ ತೋರುತ
ಬರುತಿಹ ಬೆಳೆಯನು ಸಿರದಲಿ ಧರಿಸುತ
ಸರುವರ ಕರೆಯುವ ಕೇಕೆಯ ಹಾಕುತ.

ಕುಣಿವುದು ಹಗಲಿರುಳು
ಬೆಳೆಗಾಲದ ಕುರುಹು
ಹೊಸಕಾಲದ ನವಿಲು.

# ರತ್ನಗಂಬಳಿ

ಹಸುರು ಹುಲ್ಲ ಹೊಸತು ರತ್ನಗಂಬಳಿ
ರಸಿಕ ಜನಕೆ ಸೃಷ್ಟಿಯಿತ್ತ ಉಂಬಳಿ.

ಪಚ್ಚೆ ಹೊಲದಿ ಮಲೆಯ ಕೆಳಗೆ ಮೇಲಕೆ
ಅಚ್ಚ ಹಸುರಿನುಣಿಸು ಕಣ್ಣ ಗೋಲಕೆ.

ಕರಿದು ಬಸುರಿನಿಂದ ಬಂದ ಹಸುರಿದು
ಹಿರಿಯ ಬಣ್ಣಗಾರಗೊಂದು ಹೆಸರಿದು.

ಬಾನು ಸುರಿದ ಮಳೆಯ ಹನಿಯ ಪರುಷವು
ತಾನೆ ನೆಲಕೆ ತಂದ ರೋಮಹರುಷವು.

ಮಳೆ-ಮೋಡದ ತೆರೆ-ನೆರವಿಯ ಹಾರಿಸಿ
ಹೊಳೆಹೊಳೆಯುವ ರವಿಯು ಕಿರಣ ತೂರಿಸಿ.

ಹಸುರೊಂದಿದ ನೆಲವಪ್ಪುತ ಸಲಿವನು
ಹಸುಗೂಸಿನ ನಗೆಮೊಗದಲಿ ನಿಲುವನು.

ಇಲ್ಲಿ ಉಲಿವುತಿಹುದು ಹಕ್ಕಿಯೋರಣ
ಬಲ್ಲಹಾಗೆ ಹಾರಾಡುವ ತೋರಣ.

ತಳತಳಿಪುವು ಹುಲ್ಲ ತುದಿಗೆ ನೀರ್ವನಿ
ಜಳನೇವಿಯು ನಲಿದು ಕರೆದ ಕಣ್ಬನಿ.

ನೋಡೆ ಸುಖವು, ಸೋಂಕೆ ಸುಖವು, ಸಂತಸ
ಬಾಡಿ ಬರೆತ ಜೀವಲತೆಗೆ ನವರಸ.

ಹಸುರು ನೆಲವು ಹಸುರು ನೋಟ – ಭಾವವು
ಹಸುರು ಮನವು ಅಚ್ಚ ಹಸುರು ಜೀವವು.

ಇಂಥ ನೆಲದಿ ಮುಗಿಲ ನೋಡುತೊರಗುವೆ
ಅಂತವಿರದ ಬಾಳ್ವೆಯಲ್ಲಿ ಬೆರೆಯುವೆ.

# ತಣ್ಣನ ಗಾಳಿ

ಮೆಲ್ಲನೆ ಸುಳಿಯುವ ತಣ್ಣನ ಗಾಳಿ
ಎಲ್ಲೆಡೆ ಇದ್ದರು ರೂಪವ ತಾಳಿ
ಒಮ್ಮೆಯೆ ಬರುವುದು ಮೊಗವನು ತೋರಿ
ಎಲ್ಲಿಗೊ ಕರೆವುದು ಬಳಿಯಲಿ ಸಾರಿ. ಪ.

ಬೆಳದಿಂಗಳಿನಲಿ ಮುದಬಳ್ಳಿಗಳು
ಬೆಳ್ಜಸಪನು ತಳೆದಲುಗದೆ ಇರಲು
ಮೌನವದಾಕಾಶವ ತುಂಬಿರಲು
ಗಾನವು ಹೃದಯದಿ ಹೊಮ್ಮುತಲಿರಲು
ಎಲ್ಲೆಡೆ ಇದ್ದರು ರೂಪವ ತಾಳಿ
ಮೆಲ್ಲನೆ ಸುಳಿಯುವ ತಣ್ಣನ ಗಾಳಿ.

ಒಲವಿನ ತೋಟದ ಬಾಗಿಲ ತೆರೆದು
ಹಿಗ್ಗಿನ ಹೂಗಳ ತೂಗುತ ನೆರೆದು
ತಿಳಿಯದೆ ಕಂಪನು ತೂರುತ ಒಂದು
ಕಳೆಯೇರುತ ತಾ ಹೃದಯದಿ ನಿಂದು
ಆನಂದದ ಬೆಳೆಯನು ಹಾಸಿಹುದು
ಚೆಂದದ ಸಿರಿಯನು ಸೂಸುತಲಿಹುದು.

# ಬೀಸು ತಾಯಿ !

ಬೀಸು ತಾಯಿ ! ಬೀಸು ತಾಯಿ !
ಬೀಸಿ ಬೇಗ ಬಾರ ತಾಯಿ !

ಭೋರ್ಭೋರ್ರೆನೆ ಬೀಸಿ ಬೀಸಿ ಬೇಸರೇಕೆ ಇಲ್ಲ ನಿನಗೆ ?
ಬಾರ ಬಾರ ಎಂದು ಜೀವ-ಶಿಶುವು ಮೊರೆದು ಕರೆಯುತಿರಲು,
ಬೀಸು ತಾಯಿ ! ಬೀಸು ತಾಯಿ !
ಬೀಸಿ ಬೇಗ ಬಾರ ತಾಯಿ !

ನಿನ್ನ ಕೂಡ ಕೈಯ ಹಿಡಿದ ಮರಗಳೆಲ್ಲ ಮರುಗುತಿಹವು
ಚೆನ್ನನಸುಕು ಮೂಡುತಿಹುದು, ನೇಸರಯ್ಯ ಒರಲು ಇರುವ,
ಬೀಸು ತಾಯಿ ! ಬೀಸು ತಾಯಿ !
ಬೀಸಿ ಬೇಗ ಬಾರ ತಾಯಿ !

ಹಿಟ್ಟು ಆಗಿ ಹೂವ ಹುಡಿಯು, ಗಾಳಿ-ತಾಯೆ, ಸುತ್ತುಮುತ್ತು
ದಟ್ಟವಾಗಿ ಹುಲ್ಲು ಹಸುರು ನೆಲದ ಮೇಲೆ ಬೀಳುತಿರಲು,
ಬೀಸು ತಾಯಿ ! ಬೀಸು ತಾಯಿ !
ಬೀಸಿ ಬೇಗ ಬಾರ ತಾಯಿ !

# ಆ ಸಂಜೆ

ರಸಿಕ ಗೆಳೆಯನ ಕಲೆಯ ಕುಸುರಾದ ಶಾಂತಿಕೇ-
ತನವೆಂಬ ಮನೆಯ ಮೇಲಟ್ಟದಲಿ ಕುಳಿತು ಮುಂ-
ಬಯಲ ತಂಗಾಳಿಯಪ್ಪುಗೆಗೆ ಮೈನೀಡುತಲಿ
ಹರುಷದಲಿ ಹಗುರಾಗಿ ನಾ ಕಂಡುದೆಂಥ ಸಂಜೆ !
ಪಶ್ಚಿಮದಿ ಮುಳುಗಲಿಹ ಸೂರ್ಯ ಮೋಡದ ಮುಸುಕ
ಹೊದ್ದಿರಲು ನೆಲದ ನವಿಲಿನ ಹೊನ್ನಗರಿಯಾಗಿ
ಇದೆ ದಿಗಂತವು, ಹೊಂಗದಿರು ಮೋಡದಂಚಿನಲಿ
ತೊಳೆತೊಳೆದ ಚಿನ್ನವನು ತೊಡಿಸಿ ಚಿನ್ನಾಟವಾ-
ಡುತಲಿಹವು, ಮುಗಿಲೆಲ್ಲ ಬಣ್ಣದರಮನೆಯಾಗಿ
ಮೆರೆಯುವುದು, ಜೀವದಾಶದ ಮಧುರ ಸ್ವಪ್ನಗಳು
ಮೇಲೆದ್ದು ಮುಗಿಲ ಮುಟ್ಟುವವು, ಈಗಿದ್ದ ಬಾ-
ಳಿನ ಕೊರತೆ ಕೊರಗುಗಳು ಕ್ಷಣದ ಕನಸಿನ ಅಮೃತ-
ಅನುಭವದಿ ಕರಗಿ ಮರೆಯಾಗುವವು, ಬರಲಿರುವ
ವೈಭವವ ಸಾರುವವು, ಮುನ್ನೋಟ ಬೀರುವವು.
ಸಾವ ದಿವಸದ ಕ್ಷಣಿಕ ಸಂಜೆಯಾದರು ಏನು ?
ಭಾವುಕನ ಸವಿದುಟಿಗೆ ನಿತ್ಯವಾಗಿಹ ಜೇನು !

# ರಾತ್ರಿ

ರಾತ್ರಿಯೆಂಬಿವಳಾವ ಧಾತ್ರಿ ?    ಪ.

ಒಮ್ಮೆ ಕತ್ತಲೆಯ ಕರಿಸೀರೆಯನು ಉಟ್ಟು
ಒಮ್ಮೆ ತಿಂಗಳನ ಬಿಳಿಬಟ್ಟೆಯನು ತೊಟ್ಟು
ನೂರಾರು ನೆಲಜಲದ ಜಗವೆಲ್ಲವನ್ನು
ನಾರುತಲಿ ಸಲಹುವಳು ಚಿಂತಿಸುತ ಚೆನ್ನು
ರಾತ್ರಿಯೆಂಬಿವಳಾವ ಧಾತ್ರಿ ?

ಮೇಲೆ ಕಾಣಿಸೆ ಮೈಯು ನಡುಗಿಸುವ ಮಾಯಿ
ನಾಳೆ ಬಿರಿಯುವ ಮುಗುಳ ತಳೆದಿರುವ ತಾಯಿ.
ಕಪ್ಪು ಕುರುಳುಗಳಿಂದ ತಲೆಯ ಹೀರಿದರು
ಒಪ್ಪುವೊಲು ತಾರೆಗಳ ನಡುವೆ ತೂರಿಹಳು.
ರಾತ್ರಿಯೆಂಬಿವಳಾವ ಧಾತ್ರಿ ?

ಇವಳು ತಾ ಗಾಳಿ ಕೈಯಾಡಿಸಲು ತೀಡಿ
ಸವನಿಪುದು ಸದ್ದಿರದೆ ಸುಸಿದ್ದವೋಡಿ.
ಇವಳ ಹೊಟ್ಟೆಯೊಳೆಲ್ಲ ಜೀವಗಳು ಒಂದೇ
ಇವಳು ಮಮತೆಯಾಡುವುದು ಮುಂದೇ.
ರಾತ್ರಿಯೆಂಬಿವಳಾವ ಧಾತ್ರಿ ?

# ಭೂಕಂಪ!

ಭೂಕಂಪ! ಭೂಕಂಪ! ಯಾಕೆ ಈ ಹೃದಯಕಂಪ?
ಸಾಕುಸಾಕಾಯಿತೇ ಭುವಿಯೆ! ತಾಯ್ತನದ ತಾಯೆ!
ನೂಕುತಿರೆ ಜೀಕುತಲಿ ನಲಿವಿನಲಿ ಬಯಲಿನಲಿ
ಯಾಕೆ ಈ ಶೋಕಿಸುವ ಸೋತೆದೆಯ ನಡುಗುವಂದ?

ತಾಳೆನೆಂಬುವರೇನೆ ಎಲ್ಲಿಹುದು ನಿನ್ನ ತಾಳ್ಮೆ?
ಬಾಳ ಮೊದಲಿಗೆ ಬೀಗಿ ಉರಿ ನುಂಗಿ ನಿಂತ ತಣ್ಪೆ!
'ತಾಳುವೆನು ನೆಲನೀರು ಜಡ-ಜೀವ-ರಾಶಿಗಳ
ಗಾಳಿ ಬಾ ಸುತ್ತಾಡು' ಎಂದಾಗ ಹೇಳಿದಾಕೆ.

ಲೆಕ್ಕವಿಲ್ಲದ ಈಸು ಮಕ್ಕಳಿವು ಈಗ ನೋವೆ?
ಅಕ್ಕರೆಯ ಝರಿಯೇಸೊ ಹರಿಯುತಿರೆ ಸಾಲದಾಕೆ!
ಚಿಕ್ಕೆಗಳು ದೂರವಿರೆ ಪ್ರಾಣಪುರುಷನ ಕಂಡು
ನಕ್ಕು ನೀನವನಪ್ಪಿದಾ ಬಾಳು ಈಗ ಬೇವೆ?

ಹೊತ್ತ ಭಾರಕೆ ಅದುರಿ ನಿಂತೊಮ್ಮೆ ನೋಡಿರುವೆಯ?
ಮುತ್ತಿರುವ ಜನನೆನಿತೊ ಮೆಟ್ಟುತಿರೆ ಸಾಗಿದವಳೆ!
ಎತ್ತಣಿದು ನೆಲ ಬಿರಿವ ಅಳ್ಳೆದೆಯ ಚೀರಾಟ
ಸುತ್ತುತಿರೆ ಸೋಜಿಗದ ಆನಂದ ಮೌನದಲ್ಲಿ!

ಕರುಳು ಬರಿದಾಯಿತೇ ಕರುಳು ಬಳ್ಳಿಗಳ ಬೇನೇ?
ಅರಳಿಸಲು ಜೀವ-ಸುಮ ಸರ್ವವನು ನೊಂತ ನಲ್ಮೆ!
ಅರಿಯದೊಲು ಮೊಲೆಗುಡುತ ಹಿರಿದು ಹಿಚುಕಿದ ಹಾಗೆ
ತರವೇನೆ ಕ್ಷಣದೊಂದು ಝಲ್ಲಿನಲಿ ಜೀವಹಿಂಸೆ!

# ಏರು - ಇಳಿ

ಕಡಲುಕ್ಕಿ ದಡ ಏರಿ
ತಿಂಗಳನ ತೊಡೆಯೇರಿ
ಸವಿದುಟಿಯ ಸಾರವನು
ಕಡೆವರೆಗು ಪಡೆಯಲೆಂ-
ದಾಗಸದ ಕಡೆಯೆತ್ತಿ
ತೆರೆಗೈಯ ಕೋಟಿಗಳ,
ಕೂಗುತಿದೆ ಹೊರೆಯೇರಿ ಹೊಂಗುತಿದೆ—
ನೆಲ-ಹೆಣ್ಣು ತಲೆ ಚಾಚಿ
ಕೈಯೊಡ್ಡಿ ಕೆಲಸಾರ್ಚಿ
ಮರುಳು ನೇಹದ ಬಿರುಸು-
ಚಲವೀವ ಬಲದಿಂದ
ಮೋಹಿಸುವ ಬಲೆಯೊಳಗೆ
ಹಿಡಿದೆಳೆದು ಅಪ್ಪುತಿರೆ,
ಬಾಗುತಿದೆ ಕೆಳಕೆಳಗೆ ಸಾಗುತಿದೆ.

ಭೋರೆಂದು ಬರಿ ನೆಲದಿ
ಹೊಳೆಯೆನಿತೊ ಹರಿಯುತಿರೆ
ಬಾನಬಯಲಲಿ ತಾನು

ತಾರಗೆಯ [illegible]ುವ
ಜವದೊಡನೆ ನೇರಾಗಿ
ಕೆಲೆಯುಬಾರದೆ ಎಂದು
ಏರುತಿದೆ ಬಿಳಿನೊರೆಯು ತೂರುತಿದೆ—
ಕೊಳಿಹುಳದ ಕೆಳದಿಯುರು
ಕಾಣಿಸದೆ ಕೆಳ ನಿಂದು
ಸಿಂಪುಗವಿಯಲಿ ತಾವು
ಬೆಳೆಯಿಸಿದ ಬೆಳಕೊಗೆವ
ಮುತ್ತು-ಹವಳದ ಬೆಳೆಯು
ತೋರಿಸುತ ಕರೆದೊಡನೆ
ಸಾರುತಿದೆ ತಳತಳಕೆ ಜಾರುತಿದೆ.

ಹಗುರಿಸಧಿದೇವಿ ಮಿಗೆ
ಕರೆಕೊಂಬನೂದಿ ಬರು-
ಗಾಳಿರೆಕ್ಕೆಯ ಬೀಸಿ
ಮಗುಮುದ್ದೆ ಸಗುವಿಳು
ಎನೆ ಕರೆಯು ಮುಗಿಲೊಳಗೆ
ಮರೆತೆಲ್ಲ ಮುಳುಗಲಿಕೆ
ನೆಗೆಯುತಿದೆ ಮೇಗಡೆಗೆ ಜಿಗಿಯುತಿದೆ—
ಕರಿಮೊಗವ ಹೊರದೋರಿ
ನಡುಸೀರ ಅರೆಗಲ್ಲು
‘ಆಗಲಿ ಪೋಪುದು ಎಲ್ಲಿ
ತೆರೆಯುಣಿಸಿ ತೆರೆದೆದೆಗೆ
ನಿಲ್ಲೆ’ಂದು ಕರೆಯುತಿರೆ
ಕರಿಗರುಳ ನಿಟ್ಟುರದಿ,
ಮುಗಿಯುತಿದೆ ನೆಲದಿ ಮೊಗ ಹುಗಿಯುತಿದೆ.

# ಸಂಗೀತ-ಜನ್ಮ

'ಓಂ ಓಂ, ಓಂ ಓಂ, ಬಹುಸ್ಯಾಂ, ಬಹುಸ್ಯಾಂ'
ತೆರಪಿನೊಳೆದ್ದಿತು ಮೊದಲಿನ ಗಾನವು
ಕರಗಿತು ತನ್ನೊಳು ತೆರೆಯೊಳು ಹರಿಯುದೆ
ಅಸತೋ ಸದಜಾಯತ, ಅಸತೋ ಸದಜಾಯತ.

ಬಯಲೊದವಿತು ಬಳೆಗಾಳಿಗಳಾಡಿದವು
ಸುಯ್ ಸುಯ್ ಭೋಭೋರ್ ಸಂಗೀತದಲಿ
ಅಲೆಸಾಲದೆ ಹಿರಿಹಿಗ್ಗಿತು ಬಯಲು
ಗುರಿಯಿದು ಗಾನವು ಸರುವಕೆ ಎಂದಿತು ಆ ತೆರವು.

ಗೋಲದ ಗೊಂಚಲು ಸಿಡಿದವು ಸುತ್ತಲು
ಸೋಹಂ ಸೋಹಂ ಎಂಬುವ ದನಿಯೊಲು
ಸೊಲ್ಲುತ ನಡೆದವು ನೇಮದ ಕೈಯಲಿ
ನುಂಗಿದ ತೇಜದ ಕಾವನು ಇಳಿಸಲು ಹಾಡುತಲಿ.

ಇಳೆಯೊಂದಾಯಿತು ತಾಳ್ಮೆಯ ತಾಯೆನೆ
ಬೆಳೆಬೆಳೆ ಉಸಿರೇ ಎಂದಿತು ಚೆಂದದಲಿ
ಒಳನುಂಗಿದೆನುರಿ ಬಾ ಕುಣಿ ನಲಿಯೆನೆ
ನೆಲನೀರಾಟದಿ ಸೃಷ್ಟಿಯು ಹುಟ್ಟಿತು ಹಾಡುತಲಿ.

ಮೊದಲಿನ ಹುಲಿದೊವಲರು ಕರಿಮನುಜರು
ಉದಯದ ಕೆಂಡದ ಚೆನ್ನನು ನೋಡಿ
ಕತ್ತಲೆಗಪಿಯಿಂ ಬೆಳಕಿಗೆ ನುಗ್ಗಿ
ಹೋ ಹೋ ಹಾಡಲು ಹುಟ್ಟಲು ಮನುಜನ ಸಂಗೀತ!

# ಅಪರಂಪಾರ

ಅಪರಂಪಾರ! ಅಪಾರ!
ಈ ಜಗಜಗಗಳ ಹಾರ!
ಆಧಾರಮಯ ನಿರಾಧಾರ
ದರ್ಶನಮನಸಕೆ ಅತಿ ದೂರ!

ತನ್ನಯ ತಿರುಗಣಿ ಮಡುವಲಿ
ತಿರುಗುವ ಕಿರುನೋಟದ ನರ-
ನೆಲ್ಲೆಡೆ ತೇಲುವ ಗೋಲದ
ಹಿರಿಯಲೆ-ಗಡಲನು ಅರಿವನೆ?

ಬೆಳಕಿನ ಬಳ್ಳಿಗಳೆನಿತೋ
ನಡುವಂತರದಲಿ ಬೆಳೆಯುತ
ಹಿಡಿಹಿಡಿ ಸಿಡಿಲಿನ ಹೂಗಳ
ಮಿಂಚಿನ ಮುಗುಳುಗಳೆಸೆವುವು.

ಸಾವಿರಗೇವಿರದಳತೆಯ
ಮೀರಿದ ಸೂರ್ಯನ ಸೋಲಿಪ
ಎನಿತೋ ಮಹಾಮಹಾ ರವಿ
ತೂರಿವೆ ತೂಕದಿ ಸಾರಿವೆ.

ತೆರೆಯದ ಕಣ್ಣಿಗೆ ತೆರವಿನ
ನೆರೆಯನೆ ತೋರುವುದಾದರು
ಹಿರಿಕಿರಿದಿನ ಕಣಕಣದಲಿ
ಅರಿದಾದರಿವೇ ತುಂಬಿಹುದೆ?

# ಎಂದೊ ಏನೊ !

ಒಂದ ಮಿಂಚು ನಿಂದಿರದಲೆ ಸಂದಿಹೋಯಿತು
ಎಂದೊ ಏನೊ ಎಂದೊ ಏನೊ ಸಿಂದೆ ನಿಲುವ
ಮಿಂಚಕಾಂಬೆನು !

ಮೊದಲು ತಾನೆ ಪುದಿದು ಒಂದು ಎದೆಯ ತೆರೆಯಿತು
ಕದದಿ ನಿಲದೆ ಮುಡದ ಬೆಳಕು-ತಳಿಯ ಹಾಕಿ
ತೊಳಗಿ ತೊಳೆಯಿತು.

ಚೆಲುವುಗಣ್ಣು ಅಂದು ಕೆಂಪುಹರಳ ಪಡೆಯಿತು
ಒಲವು ತುಂಬಿ ಕೆಲಬಲದಲಿ ನೋಡಲೆಂದು
ಹೃದಯ ನಡೆಯಿತು.

ಹಸಿರು ಕಂಡು ಉಸಿರು ಪೂಸಿ ಹಸಿವು ಹೊಂದಿತು
ಕೊಸದೊ ಏನೊ ಸಸಿಯ ಸೋಟದೂಟವುಂಡು
ತಣಿದು ತೇಗಿತು.

ಎಳೆಯ ಜೀವ ಮೊಳೆತ ಹುಲ್ಲ ತುಳಿಯದಾಯಿತು
ತಳತಳಿಸುವ ಮುತ್ತುಹಸಿಯ ಕಳೆಯನೆತ್ತಿ
ಕುಡಿಯಲೆಂದಿತು.

ಹೇಸಿ ಹೂವ ಬೈವ ಜನವ ಸುಳ್ಳು ಮಾಡಿತು
ಲೇಸು ಇದರ ಮಾಟ ನೋಡಿರಯ್ಯ ಎಂದು
ತೂರಿ ತೋರಿತು.

ಸಂಪಿಗೆತೆನೆ-ಮಲರಿಗೊಲವ ಸೂರೆ ಮಾಡಿತು
ಕಂಪಿಸರಸಿ ಸೋಂಪಿಯಿಂದ ಇರುವಳೆಂದು
ಮುತ್ತಿ ಮೂಸಿತು.

ಬರುವ ಮೋಡ ಕರೆವ ಮಳೆಯ ಕಂಡು ಕೂಗಿತು
ಹಿರಿಯ ಹಿಗ್ಗ ಹುಚ್ಚು ಹೊಳೆಯ ಹರಿಯಿಸೆಂದು
ಬಾಗಿ ಬೇಡಿತು.
ಬಯಲತೋಟಕೆಂದು ಮೇಲೆ ಹಾರಲೆಂದಿತು
ಆಯ್ದು ಚಿಕ್ಕೆ ಹೂವ ತರಲು ಜೀವ ಮುಡಿವು
ಎಂದು ಸಾರಿತು.
ತಿಳಿಯ ತುಂಬುದಿಂಗಳಲ್ಲಿ ಸುಧೆಯ ಸವಿಯಿತು
ಬಿಳಿಯ ಸೋನೆ ಚೆಲ್ಲುತಿಹುದು ಬಳಿಯಿರಯ್ಯ
ಎಂದು ಮೊರೆಯಿತು.
ಮೇಲುಕೆಳಗೆ ಎಲ್ಲ ಕಡೆಗೆ ಚಲ್ಲವೆಂದಿತು
ಗೋಲಗಳಲಿ ಗಾಳಿಹುಳದಿ ಒಂದೆ ಕಲೆಯು
ಕಂಡು ನಂಬಿತು.
ಒಲವು ಹಿಗ್ಗಿ ಹೊಲೆಯ ಕೂಡ ಕೆಲೆಯಲೆಂದಿತು
ಚೆಲುವು ಕಡಲಿನಲ್ಲಿ ಹೊಲೆಯ ಬೆಲೆಯು ಎನಿತು
ಎಂದು ನಲಿಯಿತು.
ನೋವಿನಲ್ಲಿ ಸಾವಿನಲ್ಲಿ ಇರುವೆನೆಂದಿತು
ಓವ ಕರುಣೆ ಅವಿತು ಕಾಯುತಿಹುದು ಎಲ್ಲ-
ವೆಂದು ಕುಣಿಯಿತು.

*  *  *  *

ಎಲ್ಲ ಇದ್ದು ಈಗ ಇರದ ತಿರುಕನಾಗಿಹೆ
ಸೊಲ್ಲು ಅಡಗಿ ಜೀವ ಕುಸಿದು ನರಕವೆಲ್ಲಿ
ಬೇರೆ ಎನ್ನುವೆ.
ಕಂಡ ಚೆಲುವೆ, ಅಪ್ಪಿಕೊಂಡ ಬಾಳೆ, ಬೇಡುವೆ
ಉಂಡ ಸವಿಯ ಕಸಿದು ಕೆಂಡದೊಳಗೆ ನೂಕಿ
ನಗಲುಬೇಡಿರೆ.

# ಮಲೆನಾಡಿಗೆ ಮುಡಿಪು

೧

ಎಲ್ಲ ಕವಿಗಳ ಹಾಗೆ
ಬಲ್ಲ ಬಗೆಯಲಿ ನಾನು
ಯಾಕೆ ಈ ಮಲೆನಾಡ
ಲೋಕದಣುವನು ಕಂಡು
ಮನಸೋತು ಕಣ್ತಣಿದು
ಮನವಾರೆ ಹೊಗಳುವುದು?
ಯಾಕೆ ಈ ಮಲೆಕೊಳ್ಳ-
ದೇಕಭೂ-ಭೂತವನು
ಕಂಡೊಲಿದು ಕಂಬನಿಯ
ಪಿಂಡದಲಿ ತಣಿಸುವುದು?
ಹುಲಿಹಾವು ಕೂಗಿಡುವ
ಮಲೆಗಾಡ ಕೊಳೆಹುಲ್ಲು
ಹುಳುತಿಂಬ ಎಲೆಗುಂಪು
ಹಳಪೊದೆಗಳಿಡಿಕಿರಿದ
ಮಳೆಮೊನೆಯು ಇರಿವಿಳೆಯ
ತೆಂಗಿನ ದಿಗಂಬರರ
ಹಿಂಗದೊಲಪಿನ ಹಾಡು-
ತಿಳಿಗೊಳದಿ ಆಡು ಏಕೆ
ನೆಳಲಾಗಿ ನಿಲ್ಲಿಸಲಿ?
ಬಯಲಲ್ಲ, ಮಲೆಯೆಂದೆ?
ಬೋಳಲ್ಲ, ಹಸುರೆಂದೆ?
ಎಂದೇನೊ ಜೀವವಿದು
ಮಂದವಾಗಿಯೆ ಇತ್ತು—
ವಾಣಿ ಮೂಕಾಗಿತ್ತು
ಮನವು ದಿಗಿಲಿನೊಳಿತ್ತು
ದೇಹ ದಣಿದೊಣಗಿತ್ತು
ಸ್ನೇಹ ನವೆದೊರಗಿತ್ತು.

*  *  *  *

## ೨

ಇರುಳೊಂದು ಬೆಳಗಾಯ್ತು
ನೆರೆಬಂತು ಬಗೆಹೊಳೆಗೆ!
ತಿರೆಯಿಲ್ಲಿ ತನ್ನೊಡಲೊ-
ಳುರಿವ ತನಿಗೆಂಡಗಳ
ಬೇಗುದಿಯ ಬಿಗಿಯುಸಿರ
ನುಂಗಲಾರದೆ ನೆಗೆದು
ಕೆಮ್ಮಣ್ಣು ಕೆನ್ನೆಗಳು
ಕೋಪದಲಿ ಕೆಂಪೇರೆ
ಹೊರೆಯಾದ ಹೊರಮೈಯು
ಕರಿಕಾಗೆ ದಳ್ಳುರಿಗೆ
ಸಿಡಿಯುತಿದ್ದಿತು ಮೇಲೆ
ಸಿಡಿಗುಂಡು ಸಾವಿರದಿ

ಘಟ್ಟಗಳ ಬೆಟ್ಟಗಳ
ಅಟ್ಟಮನೆಸಾಲಾಗಿ
ಬಾ ನೀರೆ ನೀರೆಂದು
ಬಾನೇರುತೇರುತಲಿ
ತಂಪು ತಾಯಿಯ ಬಯಸಿ
ತಂಪುಣಿಸೆ ಮುಗಿಲೆಂದು
ನಿಂತಿದೆಯನಂತದಲಿ
ಸಂತವಿಡುವಾಗಸದಿ
ಮುದ್ದಿಸುತ ಮೋಡಗಳ
ಮಂಜುಪರಿಯೋಡಗಳ
ಕ್ಷಣಕ್ಷಣಕೆ ತಂಪುಂಡು
ತಣಿದು ತಂಗಿಹುದಿಲ್ಲಿ.

* * * *

## ೩

ಬೆರಗಾದೆ, ಕರಗಿತೆದೆ
ಕಣ್ಣೀರ ಹರಿಯಾಗಿ
ಜಡವಲ್ಲ! ಜಡವಲ್ಲ!
ಕುರುಡು ನಡೆ ಕೊರಡಲ್ಲ!
ಬರಿ ಕಲ್ಲು ಮುಳ್ಳಲ್ಲ!
ಬರಿ ಹಸುರು ಮರವಲ್ಲ!
ಒಚಲೊಡನೆ ಒಡೆಯನಿಹ
ಕಡೆಗಾಣದುಸಿರೊಂದು
ಆಳುತಿದೆ ಒಳಹೊರಗು

ಏಳು ಜೀವವೆ ನೋಡು
ಈ ಜಿಸುಗುಜೇಡದಲಿ
ಈಜೇಳು! ನಲಿಯೇಳು!
ನಾಲಿಗೆಯೆ ನಿಲ್ಲದಿರು
ಹಾಲುಂಡ ಸವಿ ಸಾರು.
ಹೇ ಭೂಮಿ! ಹೇ ಭೂಮಿ!
ಈ ಕೂಸ ಕರೆದುಕೊ!
ನಿನ್ನೊಲುಮೆ ಹಿರಿಮೆ ಕೊಡು
ನಿನ್ನೊಳದ ಉರಿವಾರಿ

ನೀನುಂಬ ತಣಿವ ತಾ!
ನಿತ್ಯ ಶಾಶ್ವತ ಶಾಂತ
ಆತ್ಮದಚಲತೆ ನೀಡು.
ಮಲೆನಾಡೆ! ಮಲೆಗಾಡೆ
ನೆಲದಾಯ ಕಿರಿಯಣುಗಿ
ನೀನೆ ತೋರಿದೆ ತಾಯ
ನಿನಗು ಸಿರಿಗೊಂದು ನಮಃ!
ನಿನ್ನ ಸಾಮ್ರಾಜ್ಯದಿಹ
ಮಣ್ಣು-ಕಣ ಹಣ್ಣು-ಹೂ
ಎಲೆಎಲೆಯು ಗೀಚುಗೆರೆ
ಮಲೆಮುಗುಟ ಮರದಬ್ಬ-
ಗಳನೆಲ್ಲ ಒಂದೊಂದೆ
ಹೊಳೆಮಿಂಚು ಬೇಗದಲಿ
ಬಿಗಿದಪ್ಪಿ ಮುದ್ದಿಸಲು
ಎರಗುತಿವೆ ಪ್ರೇಮನವು!

* * * *

೪

ಕೊಳ್ಳದಾಳವ ಸುತ್ತಿ
ಬೆಳ್ಳ ಮುಗಿಲಿನ ಬುಡದಿ
ನೀ ನಿಂತುದೇನೊಳ್ಪು!
ಚೆನ್ನಚೆಲುವಿನ ನವಿಲು
ತನ್ನೆಲ್ಲ ಗರಿಗಣ್ಣು
ತೆರೆದಂತೆ ಹೆಚ್ಚುತಿಹ
ಸಿರಿಯ ಪರಿಪೂರ್ಣತೆಯು!
ನಿತ್ಯವೂ ಮಳೆಗೆಳೆಯ
ತಂಗಾಳಿ ತಂಗಿಯರು
ನಿನ್ನೊಡನೆ ಆಡುತಿರೆ
ಚೆಂದಚೆಂದದ ಆಟ,
ಅಚ್ಚ ನೀಲಿಯ ಹೊದ್ದು
ಹುಚ್ಚ ಹಸುರನು ಹೊದ್ದು
ನೀನಿರುವ ಐಸಿರಿಗೆ
ನನೆಯಿಲ್ಲ, ಕೊನೆಯಿಲ್ಲ!

* * * *

೫

‘ಕುದುರೆ ಮುಖ’ದಲಿ ಮಂಜು-
ಗುದುರೆಯಾಗಿಹೆ ನೀನು
ಕೆಲವೆಡೆಗೆ ಗುಡಿಗಳನ
ಕೆಲವೆಡೆಗೆ ಬರಿ ಬುಗುಟಿ
ನಿನಗಿಲ್ಲ ತಾಳ್ಮೆಯಲಿ
ನೆನೆದು ಮಾಡಿದ ಮಾಟ

ಉರಿಯೊಡಲ ಸುಡುಮೊಗದ
ನಿರಿಗೆಗಳ ಏರಿಳಿತ
ನೀನಿರುವೆ, ನಿನಗೆಲ್ಲಿ
ನಿಯಮ ನಿರ್ಬಂಧನವು?
ನಿನ್ನಲ್ಲಿ 'ಹೇಮವತಿ-
ನೇತ್ರಾವತಿ ಫಲ್ಗುಣಿಯು'
ಮೊದಲಾದ ಹೊಳೆ-ಹೆಣ್ಣು
ಮೊದಲ ತಡಸಲದಲ್ಲಿ
ಹುಟ್ಟುತವರಸು ಪಡೆದು
ಕಟ್ಟಕಡೆವರ ಹರಿದು

ನಿನ್ನ ಮೈದೊಳೆಯುವರು
ಮುನ್ನೀರ ಕೂಡುವರು.
ಹಸಿಬಸಿರು ಮುಗಿಲುಗಳ
ಜನಿಸುತಿಹ ಮಗುಗಳೊಡ
ಚಿನ್ನಾಟವಾಡುತಲಿ
ಚಿಮ್ಮುತಿಹ ನಗೆಯಿಂದೆ
ಝುರಿಯೆನಿತೊ ಕೂಡುತಿರೆ
ಕಿರಿಜೋಗ ಬೆರೆಯುತಿರೆ
ನೀನು ಬೇಡುವ ತಣ್ಪು-
ತೀರ್ಥವನು ಕೊಡುತಿಹರು.

*　　*　　*　　*

೬

ನಿನ್ನಲಿಹ ಗದ್ದೆಗಳ
ಚೆನ್ನು ಬೇರಿನ್ನೆಲ್ಲಿ?
ಒಮ್ಮೆ ಅದು ತೋರುವುದು
ಸೋಪಾನ ಶಾಲಿವನ
ಒಮ್ಮೆ ಸಮನೆಲಗಟ್ಟು.
ಪಯಿರು ಪಚ್ಚೆಯ ಹರುಹಿ
ಗೆರೆಯೆಳೆದು ನಕ್ಷೆಗಳ
ಕೊರೆದಂತೆ ಕಣ್ಣಾಟ.
ಒಮ್ಮೆ ಪೈರನು ಬಳಸಿ
ನಿಂದಿರುವ ಬಾಳೆಲೆಯು
ರಾಜರಾಜ್ಞಿಯ ಮೇಲೆ
ರಾಜಿಸುವ 'ನೀಳ್ದೋಟು'
ಬಿಳಿದುಪ್ಪುಳಿನ ಚವರಿ-
ಯೆಳೆದೆಳೆದು ಬೀಸುತಿವೆ.

ಬೇರೊಂದು ಕಂದರದಿ
ಪೈರು ಮಡಿಗಳ ಸುತ್ತಿ
ನೀಳ್ಗಂಬದೊಲು ನಿಂತ
ತಾಳೆತೆಂಗಿನ ಮರದ
ಪೊರಕೆ ಬೀಸಣಿಕೆಗಳ
ಗಾಳಿಗನ್ನೆಯು ಒಂದು
ಹಸುರು ಕಳವೆಯ ಮೇಲೆ
ಒಸೆದೊಸೆದು ಜೀಳುವಳು
ನೀರಾಟದಲಿ ಮುಳುಗಿ
ನೀರೂಟವನು ಉಂಬ
ಹಸುರು ಬೆಳೆ ನೀರೆಯರು
ಬಿಸಿಲುನಗೆ ಮುಗುಳಿಂದ
ತೊನೆಯುತಿಹ ತೆನೆಯಿಂದ
ಮನ್ನಣೆಯನೀಯುವರು.

೭

ಎಂಥ ಭೂನಂದನದಿ
ನಿಂತು ಕ್ಷಣಲೀಲೆಯನು
ಗೈವಿರಹ ಪೋಗಿ ಬಹ
ಜೀವಯಾತ್ರಿಕರೇ!
ನಿಮಗೆ ತಿಳಿಯದೆ ನಿಮ್ಮ
ಧಮನಿಯಲಿ ಹರಿಯುತಿದೆ

ನೆಲ ಹಸುರು ನೀರ್ ಬಿಸಿಲು
ಕೆಳದಿಯರ ಒಲುಮೆ ಝರಿ
ಕಾಯಿರದ ಸಿಂತು ಮೈ-
ಗೋಯಿಲದಿ ನಿಲುವನಕ
ಬಿಸುಡರೆದೆ ಬಡತನವ
ಒಸರುವಕ್ಕರೆ ಚಿಮ್ಮಿಸಿ!

*   *   *   *

೮

ಒಂದೆ ಎರಡೇ? ನಾಡೆ
ಅಂದ ಹೊಂದುವ ರೂಹು!
ದುಂದು! ದಣಿಯದಿ ದುಂದು!
ಅಂದ ನಿನ್ನಯ ಚೆಂದ!
ಮರವೆನಿತೊ ನಿನ್ನಲ್ಲಿ
ತರತರದ ಹೂವೆನಿತೊ!
ಹುಲಿಯಾನೆ ಹಾವೆನಿತೊ!
ಭಯವೇಷದಭಯವೆ!
ಹುಚ್ಚುಪಚ್ಚೆಯ ಹುಲ್ಲೆ
ಬುವಿಮೈಯ ಪುಳಕವೇ!
ಮಲೆ ತೊರೆಯೆ ಮೊಲೆಹಾಲೆ!
ಹೂಗಳೇ ನಗುಗಳೇ!
ಮರಬಳ್ಳಿ ತೊಡವುಗಳೆ!
ಹಕ್ಕಿಗಳೆ ಹಾಡುಗಳೆ!
ಏನು ನಿಮ್ಮೊಂದುತನ!

ಏನು ನಿಮ್ಮೈಕತಾನ!
ಏನು ಬೆಳೆಯುಳಿದುಂದು!
ಏನು ಸೋಲದ ಒಂದು!
ಹುಟ್ಟಿಸುವ ಸಿರಿಸೊಮ್ಮು
ಎಷ್ಟೆನಿತು ದಣಿವಿರದೆ
ನಿತ್ಯ ನಿರ್ನಿರ್ವೇದ-
ನಾಟಕವ ಹೂಡಿಹುದು!
ಇದರ ಬೇರಾರರಿತು
ಮರಮರದ ಹಬ್ಬಿಪರು!
ಏನೆಂಥ ಧ್ಯಾನವೋ
ಕಾನನದ ಸಂಸಾರ-
ಕರ್ಮದಲಿ ತೊಡಗಿಯೂ
ಏನೆಂಥ ಮೌನವೋ!
ಅದ್ಭುತದ ಹಿರಿಮಿಂಚೆ!
ವಂದನವು! ವಂದನವು!

# ಭಾರತಹುಣ್ಣಿಮೆ

ಭಾರತ! ನಿನ್ನಯ ಭಾರವನಿಳುಹುವ
ಭಾರತಹುಣ್ಣಿಮೆಯೆಂದಿಗೆ ಬಹುದೋ! ಪ.

ಬರುವುದು ಬರುವುದು ಎನ್ನುತ ಎನಿತೋ
ಭಾರತಹುಣ್ಣಿಮೆ ಸಾರುತ ಸಾರಿಗಮೋ! ಅ. ಪ.

ಹೊಮ್ಮುವ ತಿಳಿನಗೆ ತುಂಬಿದ ಕೊಂಗಳೆ
ಮೈಮನದೂಟದ ಬೆಳೆತೀವಿದ ಇಳೆ
ಜೀವರ ಎಲ್ಲರ ಜೀವನ ಪೂರ್ಣಿಮೆ
ಭಾರತಹುಣ್ಣಿಮೆಯೆಂದಿಗೆ ಬಹುದೋ!

ತೇಜದ ನಿಜಸ್ವಾತಂತ್ರ್ಯದ ಕ್ಷತ್ರದ
ತೇಜಿಯನೇರಿದ ಭಾರತ ರಾಜರ
ಮೊಗಮೊಗದಲಿ ಬಿಳಿ-ಹೊಳೆಯೊಲು ಮಿರುಗಿದ
ಭಾರತಹುಣ್ಣಿಮೆ ಎಂದಿಗೆ ಬಹುದೋ!

ಕಾಲವು ಮರೆತರು ಮರೆಯದ ಕಾಲದಿ
ದೇವನ ಉಸಿರಿನ ಉಯ್ಯಾಲೆಯಾಗಿ
ಬಾಳಿದ ಧೀರರ ತಿಳಿವಿನ ಹುಣ್ಣಿಮೆ
ಭಾರತಹುಣ್ಣಿಮೆಯೆಂದಿಗೆ ಬಹುದೋ!

ಈಗಿದೆ ಮರವಿಗೆ ಸಾವಿಗೆ ಸೋಲಿಗೆ
ಬಾಗಿದ ಚಿತ್ತದ ಬಡತನ-ಹುಣ್ಣಿಮೆ!
ಹುಣ್ಣಿಮೆಯಲಿ ತೋರುವ ಹಿರಿಗತ್ತಲೆ!
ಭಾರತಹುಣ್ಣಿಮೆಯೆಂದಿಗೆ ಬಹುದೋ!

## ಮಹಾತ್ಮರನ್ನು ಕುರಿತು—

ಬೇಡಿಯೆ ಬರಬೇಕು
ನಾಡಿನ ಸೇವೆಯ ಮಾಡುವ ಭಾಗ್ಯಕೆ.    ಪ.

ದೇಶದ ತಾಯಿಯು ದಾಸ್ಯವ ಕಂಡು
ಸಾಸಿರ ಚೇಳಿನ ಕಡಿತವನುಂಡು
ಪಾಶದಿ ಕ್ಷಣ ಮನ ನಿಲ್ಲದೆ ನಿತ್ಯವು
ಸಾಸವ ಮಾಡುವ ಮಾಡಿಸುವಾತ್ಮಕೆ....

ಇಡಿಗೂಳಿಲ್ಲದೆ ದುಡಿಯುವ ದಣಿಯುವ
ಬಡವರ ಬಗ್ಗರ ಹೊಟ್ಟೆಯು ಬೆಂಕಿಯು
ಕಿಡಿಯಲಿ ನಡೆಯುತ ಕಂಬನಿಗರೆಯುತ
ಬಡತನವಿಲ್ಲದೆ ಬಡವಾಗುವುದಕೆ....

ತಾಯಿಯ ಬಂಧವೆ ಆತ್ಮದ ಬಂಧವು
ತಾಯಿಯ ಬಿಡುಗಡೆ ಆತ್ಮದ ಬಿಡುಗಡೆ
ತಾಯಿಯ ತೋಳೊಳು ಶೂಲಕೆ ಇಟ್ಟರು
ಸಾಯುವುದೇ ನಿಜ ಜೀವನವೆನಲಿಕೆ....

ಮುನಿಸಿನ ತೋರಿಕೆ ಚಿಂತೆಯು ಮುದುಡಿಕೆ
ಕನಸಿನ ಕಾಣಿಕೆ ನಗೆ-ನೆರೆ ಬರುವಿಕೆ
ಮನಸಿನ ಭಾವಗಳೆಲ್ಲವು ರಾಷ್ಟ್ರದ
ತನುವಿನೊಳಿರುವೊಲು ಕಾಣುವ ಪುಣ್ಯಕೆ....

ವಿಶ್ವವೆ ಒಳಗಣ ಆತ್ಮಶರೀರವು
ವಿಶ್ವದ ಪ್ರಾಣಿಗಳದರವಯವಗಳು
ವಿಶ್ವಾಸದ ಬಲದಿಂದಿದ ಬೆಳಸುವ
ವಿಶ್ವಸುಮೂರ್ತಿಯ ಜನ್ಮವ ಪಡೆಯಲ

ಬುಧಜನ ಮೆಚ್ಚುವ ಬುದ್ಧಿಯ ಬೆರಗಿನ
ಘನಜಲವಾಹಿನಿಯಿಲ್ಲದೆ ಅರಳಿದ
ಹೃದಯದ ಯೋಗದೆ ಸುಧೆಯನು ಸುರಿಸುತ
ಸದಯಾನಂದನ ಕುರುಹಾಗಿರಲಿಕೆ....

# ನಾಡವರು !

ನಾಡವರು ನಾವು ಕರುನಾಡವರು !
ನಾವು ಹಿರಿನಾಡವರು !          ಪ.

ಹಿರಿದಾಗಿ ನೋಡುವಾ । ಅರಿದಾಗಿ ಕೂಡುವಾ ।
ಹಿರಿಹಿರಿದನಾಡುವಾ । ಬಿರಗಾಗೆ ಮಾಡುವಾ ॥     ಅ. ಪ.

ಕಳೆದು ಕಾಡಿನ ಕೊಳೆಯು । ಹೊಲ ಬೆಳೆಯು ಹೊಂಗಳೆಯು ।
ಹೊಳೆಸಿ ನಾಡಿನ ತುಂಬ । ನಮ್ಮದೆಮ್ಮದು ಎಂಬ ॥

**ಪುಲಿಬಾಯಿ** ಹಲವಾಗಿ । ಹೊರ ಒಳದ ಹಗೆ ನುಂಗಿ ।
ಗೆಲವು-ಗುಡಿಯನು ಸೂಸಿ । ಮೆರೆವಿಳೆಯ **ಬನವಾಸಿ** ॥

ಪಂಜೆಗೆಂಪಿನ ಸೊಂಪ । ಸಾಮ್ರಾಜ್ಯಗಳ ಪೆಂಪ ।
ಕಾಲಪಟದಲಿ ಬರೆವ । ನೇಸರನ ಮೀರಿಸುವ ॥

ಕೆಳತುಳಿದು ಹುಡಿಯೂಡಿ । ಕೆರಳಿಸಲು, ಹೆಡೆ ಹೂಡಿ ।
ನೆಲ ಮುಗಿಲು ಹಾವಾಗಿ । ನಾಡ ಕಾಯುವ ಚಾಗಿ ॥

ದೇವ ಕಲ್ಪನೆಯ ಕೈ- । ಗಿಣಿಯಾಗಿ ಬಾಳು ಮೈ- ।
ಗೊಳಲೆಂದು ಮುತಮುತವ । ನಾಡ ತೇರೊಳು ಮೆರೆವ ॥

ಕವಿಯಾಗಿ ಕಲಿಯಲ್ಲಿ । ದೊರೆಯಾಗಿ ಗುರುವಿನಲಿ ।
ಹೆಣ್ಣಿನಲಿ ಹೊಳೆಹೊಳೆವ । ದೇವಿರೂಪವ ತಳೆವ ॥

**ವಿಜಯನಗರ**ಗಳಲ್ಲಿ । ಭೋಗದುಕ್ಕನು ಚೆಲ್ಲಿ ।
ಶಾಂತಿ ಶಿಲೆಯಾಗಿರುವ । **ಗೊಮ್ಮಟರ** ನಿಲ್ಲಿಸುವ ॥

ಕಲ್ಲ ಮೇಣವ ಗೈದು । ಬೆಟ್ಟ-ಬಸದಿಯ ಕೊರೆದು ।
ಭೂಕಿರೀಟಗಳೆನಿಪ । ಗುಡಿಗೋಪುರವ ನಿಲಿಪ ॥

ಮನೆಮನೆಯ ದೀಪದೊಲು । ಬೆಳಗಿ ವಚನದ ಸಾಲು ।
ಮುಗಿಲ-ದೀವಿಗೆ ಹೋಲ್ವ । ಹರಿಹಾಡುಕತೆ ಹೇಳ್ವ ॥

ವಿಶ್ವಮಾತೆಗೆ ಮಣಿದು । ಭಾರತಕೆ ಕೈಮುಗಿದು ।
ಹೆತ್ತಾಯಿ ಕನ್ನಡಕೆ । ಬಾಳ ಕಾಣಿಕೆಯೀವ ॥

# ಎಂಥ ನಾಡಿದು !

ಎಂಥ ನಾಡಿದು ಎಂಥ ಕಾಡಾಯಿತೋ !
ಹುಲುಸಾದ ಬೆಳೆ ಹೋಗಿ ಹುಲ್ಲುಕೊಳೆ ತುಂಬಿಹುದೊ !

ಹಗೆಯ ಹೆಸರನು ಕೇಳಿ ಹುಲಿಯಂತೆ ಹಸುಗೂಸು
ನೆಗೆದು ತೊಟ್ಟಿಲ ತುಳಿದು ಮೆಟ್ಟುತಿಹ ನಾಡಿನಲಿ
ಹಗೆಯ ಊಳಿಗಗೊಂಡು ನಾಯಿಬಾಳುಗಳೀಗ
ಬಗೆಬಗೆಯ ಬಾಯ್ತೆರೆದು ಹೇಡಿನುಡಿ ಬೊಗಳುತಿಹವೊ !

ನೂರು ರಾಜ್ಯವ ಕಟ್ಟಿ ಬಾನ ಛತ್ರವ ಹಿಡಿದು
'ಸಾರಿ ಬನ್ನಿರಿ ಸರುವ ಜನ ಮನವೆ ಮತಗಳೇ'
ಸಾರಿ ಈ ಪರಿ ಬಾಳ್ದ ಸೀಮೆಯಲಿ ಇದುವೀಗ
ಹರಿದು ಹಂಚುವ ಕಲಹ ಕುಲದೈವವಾಗಿರುವುದೊ !

ಇಲ್ಲಿಯೇ ಈಸುವುದು ಇದ್ದು ಜೈಸುವುದೆಂಬ
ಎಲ್ಲರೊಡೆಯನ ನಂಬಿ ನಡೆಯುವುದು ಎಂಬ ಆ
ಸೊಲ್ಲೀಗ ಗಾಳಿಯುಯ್ಯಾಲೆಯಲ್ಲಿ ತೂಗುತಿರೆ
ಒಲ್ಲೆ ಬಾಳೆನು ಎಂಬ ಗೋಳದನು ಕೇಳುತಿಹವೊ !

ನೆಲದ ಒಳ ಉರಿಯೆದ್ದು ತೂರಿರುವ ಮೊರಡಾದ
ಸಿಲೆಯು ಸಾವಿರದಿ ಗುಡಿ-ಬಸದಿ-ರಥ-ಗೊಮ್ಮಟರ
ಚೆಲುವು ನನೆಕೊನೆವೋಗೆ ನಿಲ್ಲಿಸಿದ ನಾಡಿನಲಿ
ಚೆಲುವು, ಕಲೆ, ಹಾಡು, ನುಡಿ-ಹೂವುಗಳ ತುಳಿಯುತಿಹರೊ

ಕಾಲಭೂತದ ಕಠಿಣ ಕತ್ತಲೆಯ ಸೆರೆಯಲ್ಲಿ
ಸಿಲುಕಿರುವ ಪುಲಿಕೇಶಿ ನೃಪತುಂಗ ಬಲ್ಲಾಳ ಹರಿಹರರೆ
ಇಲ್ಲಿಯೇ ಉಸಿರಾಡಿ ಈ ನಾಡು ಕಟ್ಟಿದಾ
ಎಲ್ಲರೇ ಮರಳುವುದು ನಿಮ್ಮ ಸಿರಿ ಸೂರೆಗೊಡಲು !

# ಕನ್ನಡದ ಚಂದ್ರ

ನಿನ್ನ ಹೊಸ ಹುಣ್ಣಿಮೆಯ ಬೆಳ್ಳಬೆಳಕಿನ ಮಳೆಯ-
ನೆಂದು ಕರೆಯುವಿ ಹೇಳು ಕನ್ನಡದ ಚಂದ್ರ!
ಎಮ್ಮ ಹೃದಯವನೆಂದು ಹರುಷ-ಪೂರದಿ ತುಂಬಿ
ತುಳುಕಾಡಿಸುವಿ ನೀನು ನಿತ್ಯ ಜಪ ಮಂತ್ರ!

ಹಿಂದೆ ಗುಡುಗಾಡಿ ಹಗೆಯಟ್ಟಿ ನಾಡನು ಕಟ್ಟಿ
ಮೆರೆದ ಬೀರರ ಬೀಗಿದೆದೆಯಲ್ಲಿ
ನಿಂದು ತಮ್ಮೆಲ್ಲವೂ ನಾಡಿಗೇ ಮುಡಿಪೆಂದ
ಚಾಗಿಗಳ ತುಂಬುಗೈ ಬೊಗಸೆಯಲ್ಲಿ.

ಸರ್ವಮತಗಳ ಬೆರಸಿ ಸಮರಸವನೂಡಿದಾ
ದಿವ್ಯಜೀವಿಗಳ ಮೈಮನದಲ್ಲಿ
ತುಂಬುದಿಂಗಳ ತೋರಿ ಶಿಲ್ಪಿಗಳ ಕೈಯಲ್ಲಿ
ಹಾಡುಗಾರರ ನಲಿದ ನಾಲಗೆಯಲಿ.

ಪರಚಕ್ರದುದಯತೇಜದಿ ಮುಂದೆ ಕಳೆ ಮಾಸಿ
ಕಲೆಗೊಂಡ ಮೈತೆರೆದು ಕೆಳಬಾಗಿ
ಸರಿದಾಡಿ ಕಾಲನಂಗಳದಲ್ಲಿ ಕಂಡರೂ
ಕಾಣದೊಲು ಹಾಳುಸುರಿವಂದವಾಗಿ.

ಸೊರಸೊರಗಿ ಶೂನ್ಯಘನಘೋರ ನರಕಕೆ ಜಾರೆ
ಇಂದಿನೀ ಎಚ್ಚರದ ಕೆಚ್ಚಿನೊಳು
ಮರಳಿರುವ ನಿನ್ನೊದವು ಬಿದಿಗೆ ತದಿಗೆಯ ಸೊಬಗು
ತಣಿಗಾಣುತಿರೆ ತಂಪುಬೆಳಕಿನಲ್ಲಿ.

ಕುಂದು ಕರೆಗಳ ಏರಿ ಹರಿತ ಕೊರೆತವ ದೂರಿ
ಹಿರಿದಾಗಿ ಝುಗ್ಗೆಂದು ಹೊರನುಗ್ಗಿ
ಎಂದಿಗೂ ಮುಂದರಿದು ಹಿಗ್ಗುಹಂದರವಾಗಿ
ಬರುವುದೇ ನಿನ್ನ ತಿರುಳಿನ ಸುಗ್ಗಿಯು!

# ಕಾರಣಪುರುಷ

ಬರುತಲಿಹನು ಬರುತಲಿಹನು
ನಿನ್ನಯ ಕಾರಣಪುರುಷನು

ಕಂಗೆಡದಿರು ಕನ್ನಡವೇ !
ಇನಿಜೇನಿನ ಹೊಂಗೊಡವೇ !
ನಿನ್ನ ಸವಿಯ ಸವಿ ಬೀರುವ
ಅರಸುದುಂಬಿ ಬಳಿಸಾರುವ

ಹೂವ ಮೊಗಕೆ ಮುತ್ತನಿರಿಸಿ
ಹಕ್ಕಿ ಬಾಯ್ಗೆ ಹಾಡು ಕಲಿಸಿ
ಬೆಳಗು ಚಿಮ್ಮಿ ಕಳುಹಿ ಮುಂತೆ
ರವಿ ತಾನೆಯೆ ಬರುವನಂತೆ.

ಕವಿವ ಮುಬ್ಬು ಕಳೆದು ಸೂಸಿ
ಬೆಳುದಿಂಗಳ ಮಾಯೆ ಬೀಸಿ
ಚಿಕ್ಕೆ ಮುಸುಳೆ ತೇಲಿ ಮೇಗೆ
ಚಂದ್ರ ಚೆಲುವ ಬರುವ ಹಾಗೆ.

ನೆಲದ ಒಡಲ ನುಡಿಸಿ ಕೇಳ
ಕಾದು ಕುದಿದ ಕಂಬನಿಗಳ
ಮೇಲೆ ಮೂಡಿಡವನ ಇನಿದು
ಅಡಿವಜ್ಜೆಯು ಮುಡಿಗಿರುವುದು.

ನಿನ್ನ ಸಾವು ನೋವದೆನಿತು
ಅಳವು ಮೀರುತಿಹುದು ಅನಿತು
ಬೇಗ ಬೇಗ ಸಾಗಿ ಬರುವ
ನಿನ್ನ ಜನಕೆ ಸುಗ್ಗಿ ತರುವ.

# ಎಲ್ಲಿದೆ ಯುಗಾದಿ?

ಎಲ್ಲಿದೆ ಯುಗಾದಿ?
ಎಲ್ಲವು ಯುಗಾಂತ!
ಕಳೆ ಕಳೆದು ಕಾಲ
ಕಳೆಗೆಟ್ಟಿರುವುದು.
ಇಳೆ ಇದ್ದು ಇದ್ದು
ಹೊಳಪಡಗಿರುವುದು.
ಹೊಸದಿಲ್ಲ, ಹರಿವ
ಬಿಸಿ ರಕುತವಿಲ್ಲ!
ಬೆಳಗು ಮುಳುಗುಗಳು
ಬೆಳಕು ಬೆಳೆ ಕೊಡವು.
ಹೊತ್ತು ಇದೆ ಎಂದು
ಎತ್ತ ಇದೆ ಚಲನ.
ಹೊತ್ತು ನಿಲೆ ನಿಮಿಷ
ಕತ್ತಲೆಯೆ ಅರಸ.
ಏನು ಮುಂದ ಗತಿ!
ಎನಿತು ಹಿರಿ ಮೌನ!
ಕೋಟಿ ನಕ್ಷತ್ರ
ಕೋಟಿ ಕೋಟಿ ಸಲ
ಸುತ್ತರಿದು ಬಳಲಿ
ಮತ್ತೆ ಸುತ್ತುತಿವೆ
ಸೂರ್ಯನತಿ ತಾಳ್ಮೆ
ಬಾರದೆಮಗೊಮ್ಮೆ
ಎಂದಿನೀ ಗಾಳಿ
ಇಂದು ಸಹ ಬಾಳಿ

ಹಾಗೆ ಹಾಗೆಯೇ
ಬೀಗಿ ಬೀಸುವನು.
ಪುನರಾವೃತ್ತಿಯೆ
ಘನವೇನು ನಿನ್ನ?
ನಿನ್ನ ಕೃತಿಯೆಲ್ಲ
ರನ್ನವಾಗದಿದೆ.
ಬೇಸರು ತುಂಬಿದೆ
ವಿಶ್ವದ ಒಡಲಲಿ.
ಇದು ನೀ ಬಯಸಿದ
ಪದವಿಯ ಪರಮತೆ?
ನಡೆದು ನವೆದು ಕಡೆ-
ಬೇಡುತಿವೆ ಜೀವ.
ಇದು ಯುಗದಾದಿಯೆ?
ಇದು ಹೊಸ ಮೊದಲೆ?
ಇದು ಚೈತನ್ಯವು
ಹೃದಯದಿ ಚಿಮ್ಮುತ
ಹೊಸತಿರೆಗೈಯುವ
ಹೊಸ ಯುಗಾದಿಯೆ?
ಹಳನಡೆ ತೊರೆಯದೆ
ಹಳಬರು ತುಳಿದಿಹ
ಹಾದಿಯ ಹೆಜ್ಜೆಯೊ-
ಳಾಡಿಯೆ ಹೊಸದರ?
ಎಲ್ಲಿದೆ ಯುಗಾದಿ?
ಎಲ್ಲವು ಯುಗಾಂತ!

# ಯುಗಾದಿ

ಹೊರಯುಗಾದಿ ಹೊರಳಿ ಬರುತಿದೆ
ಒಳಯುಗಾದಿ ಮರಳಿ ನಡೆದಿದೆ

ಕರೆಯುದೊಂದು ಬಂದೆ ಬರುತಿದೆ
ಕರೆಯ ಕೇಳದೊಂದು ತಿರುಗಿದೆ

ಕಾಲಹೆಗಲನೊಂದು ಏರಿದೆ
ಕಾಲದಡಿಯಳೊಂದು ಸಿಲುಕಿದೆ

ತಿರೆಯು ರವಿಯು ತಿರುಗಿ ತಿರುಗಿವೆ
ನರರ ಜೀವ ನಿಂತೆ ನಿಂತಿವೆ.

ಹೊಸತು ಎಂಬ ವರುಷ ಹಾಸಿದೆ
ಹೊಸತು ಬಗೆಯ ಹೂಗಳೆಲ್ಲಿವೆ?

ಹರಿವ ಗಳಿಗೆಯೆಂಬ ತೊರೆಯೊಳು
ಸರಿಯುದಿಹುದು ಜೀವನಾವೆಯು.

ಕರುಣವೆಂಬುದಾರ ಒಕ್ಕಲೊ?
ಮರಣವೇಕೆ ನಮ್ಮ ಬೀಕಲೊ?

ಬರುವೆ ತರುವೆನೆಂಬ ನಿಯತಿಯೋ
ಮರೆಯುತಿರುವೆ ನಮ್ಮ ಮೊರೆಯನೇ.

# ಬೊಂಬೆ

(ಮುಂಬಯಿ ನಗರವನ್ನು ಕುರಿತು)

೧

ನಿನ್ನ ಕಂಡೆ.
ಕಡಲ ನೀರ್ಕುಡಿದದರ
ಬುಡನೆಲವ ನೆಲೆ ಮಾಡಿ
ಕಪ್ಪುಮುಡಿಕೆಯು ಮೈಯು
ತಪ್ಪಲದ ಕಡೆ ತೂರಿ
ನೋಡುವರ ಮೈಮುಳ್ಳು
ಕೂಡಿ ಏಳುವ ತೆರದಿ
ಹಲ್ಲುಹಂದರ ಹಾಸಿ
ಜೊಲ್ಲು ಹಂಬಲು ತೋರಿ
ಪುಡಿಯಾಳು ಕಟ್ಟಾಳು
ಜಡದ ನಾಡಲಿ ಬಾಳು-
ವೆಲ್ಲ ಬಗೆ ಜೀವಗಳ
ಕೊಲ್ಲಲಿಕೆ ನುಂಗಲಿಕೆ
ಬಾಯ್ತೆರೆದು ಬಿದ್ದಿರುವ
ಭವ್ಯ ಘನ ಹಿರಿಮೊಸಳೆ!
ನಿನ್ನ ಕಂಡೆ!
ಮುನ್ನೆಂದು ಕಾಣದಿಹ
ಕಾಣ್ಕೆ ಕಂಡೆ!

*　*　*　*

೨

ಮೊದಲೊಂದು ಮರಿಮೀನ-
ವಿದ್ದೇನೊ! ಅದೆ ಕಾಲ-
ಪ್ರಭುವಿನರಮನೆಯೊಳಗೆ
ರಭಸದಲಿ ಸುಳಿದಾಡಿ
ಮುತ್ತುರತನದ ಸಿರಿಯ
ತೊತ್ತಾಗಿ, ಉದ್ದಿಮೆಯ
ಮದ್ಯವನು ಕುಡಿದೆದ್ದೆ
ಈಗಾದೆ ಹಿರಿಮೊಸಳೆ!
ಕಡಲೊಂದು ತೆರೆಯಲ್ಲಿ
ಕಡೆಗೈವ ಮೀನಳಿದು
ಕಡಲನೇ ಅಡಗಿಸುವ
ಕಡುಮೊಸಳೆ ನೀನಾದೆ
ಇಂಥ ನಿನ್ನನು ಈಗ ನಾ ಕಂಡೆ.
ನಿಂತು ನಿನ್ನೊಡಲೊಳಗೆ ಕಂಡೆ.

*　*　*　*

೩

ಕಾಣಲಿಕೆ ಒರಿಗಣ್ಣಿ
ಜಾಣ ಮಾನವ ಬುದ್ಧಿ
ಮಾಡಿರುವ ಪಟ್ಟಣದ
ಮೋಡಿ ಮಾಟಗಳುಳ್ಳ
ಅಂದ ಚೆಂದದ ನಗರಿ
ಮುಂದಿಗಿಹ ಮಾಽದರಿ
‘ಏನು ಹಸನಾದ ಹಿರಿ-
ಓಣಿಗಳ ವೈಭವವು
ಇಂದ್ರಭವನಗಳಂತೆ
ಚಂದ್ರನನು ಅಣಕಿಸುವ

ಬಿಳಿಕಳೆಯ ಅಡಕಲಿನ
ಮಾಳಿಗೆಯ ಮನೆ ಪೆಂಪು!
ಜನವೇನು ಸುಖದಿಹರು!
ಒಣನೆಲದ ಜೊತೆ ತೊರೆದು
ಮುಗಿಲ ಮನೆ ಸೇರಿದ್ದು
ಸಾಗರವು ಸೂಸುತಿಹ
ತಂಗಾಳಿ ಸವಿಯುಂಡು
ಬಂಗಾರ ಬಾಳುವೆಯ
ಮಾಡುವರು, ಮರ್ತ್ಯದಲಿ
ನೋಡುವರು ಸ್ವರ್ಗವನು!’

* * * *

೪

ಬೇರೊಂದ ನಾ ಕಂಡೆ
ಊರೊಂದ ಕಾಣಲಿಲ್ಲ!
ತಮ್ಮ ಮೈಮನ ಕಾಯ್ದು
ಹತ್ತು ಲಕ್ಷದ ಜೀವ
ಒಟ್ಟಾಗಿ ಒಂದಾಗಿ
ಇರುವೊಂದು ಊರನ್ನು
ಎಲ್ಲಿಯೂ ಕಾಣಲಿಲ್ಲ
ಬೇರೊಂದ ನಾ ಕಂಡೆ.
ಹಗಲ ಸೆಕೆ-ಬಿಸಿಲಲ್ಲಿ
ನೊಗದಿ ಭಾರವ ಹೊತ್ತು

ದುಡಿವ ಜನ ದನವಾಗಿ
ಇಡಿ ತೆರೆದ ಬಾಯ್ಬುರುಗು
ಬಿಸಿಯುಸಿರು ಕೆಂಗಣ್ಣು
ಕಸಿವಿಸಿಯು ಶಿಖೆ ಕಂಡೆ.
ಇರುಳ ಮಿಂಚಿನ ಸರದ
ಮರುಳು ದೀವಿಗೆಗಳೊಳು
ದಣಿದು ತಣಿಯದೆ ಮಲಗಿ
ಕನಸೆಂಬ ಕಾಳ್ಗಿಚ್ಚು-
ನೆಲ ಹೊಕ್ಕು ತಮ್ಮಾಸೆ-
ಹುಲ್ಲು ಹಸುರನು ಸುಡುವ

ಲಕ್ಷೋಪಲಕ್ಷ ನರ-
ವಾಂಛಿತದ ಜ್ವಾಲೆ ಕಂಡೆ.
ಕಡಲಡಿಯ ಹಿರಿಮೊಸಳೆ
ಒಡಲೊಳಗೆ ಸಿಲ್ಕಿರುವ
ಜೀವರಾಶಿಯ ನುಂಗಿ
ಜೀವದುಂಬಿದ ಬೊಂಬೆ
ಕಂಡೆ ನಾ ನಿನ್ನ ಕಂಡೆ.

*    *    *    *

## ೫

ಪುರೆಯುದಿರು, ಹಿರಿದಾದ-
ರೂ ನೀನು ಬರಿ ಬೊಂಬೆ.
ನಾಣ್ಯ ಮೋಹದ ಹಲವು
ಮಾನ್ಯ ಮಾನವ ಶೈಲ-
ಹೃದಯದಿಹ ಹಿರಿಹೆಮ್ಮೆ
ಆದಯ ಹಸ್ತದ ಜಂಬ
ರಚಿಸಿರುವ ಬರಿ ಬೊಂಬೆ.
ರುಚಿರವೆನಿಸುವ ಬೊಂಬೆ.
ಬಲವಳಿದ ಕಣ್ಣಿಂದ
ಹಲವು ಸಲ ಕಂಡಾಗ
ನಿನ್ನ ಪಾರತೆ ನೋಡಿ
‘ ಇನ್ನಿದುವೆ ಅಮರತೆಯು
ಮಾನವನ ನಿರ್ಮಾಣ-
ಭಾನುವಿನ ಕಿರಣ ಕೃತಿ.
ಇನ್ನೆಲ್ಲಿ ನನ್ನೊಡೆಯ ?
ಚೆನ್ನ ಇಳೆ ತಾನಾಗಿ
ತಾನೆ ನವಿಯುತ ನಿಂತ
ಸರ್ವಸಂನಿಧ ದೇವ ? ’
ಎಂದು ಅಳುಕಿದೆ, ಅತ್ತೆ
ಮಂದ ಶ್ರದ್ಧೆಯ ದೀಪ
ಆರುತಿದೆ ಎಂದೊದರಿ
ಆರಿಗೋ ಕೂಗಿದೆನು.
ಇಂದಿಗೋ ಭಯವಿಲ್ಲ
ನಾ ಕಂಡೆ; ನೀ ಬೊಂಬೆ.
ಜಂಬದೊಡ ಟೊಳ್ಳೆನುವ
ಬೊಂಬೆ ನೀ, ನೀರ್ಗುಳ್ಳೆ !
‘ ನಾ ನಿತ್ಯ, ನಾ ಸತ್ಯ ’
ಎಂದಿನಿಸು ತಿಳಿಬೇಡ.
ಕಾಲಕತ್ತಲೆ ಮುಸೆಯ
ಸಾಲಿನಲಿ ಹಿಂದಿರುಗಿ
ನೋಡಕೋ ನಿನ್ನವೊಲು
ನಾಡಶೋಭೆಗಳಾದ
ಪಟ್ಟಣದ ಮೊಟ್ಟೆಗಳು
ಮಣ್ಣುಹುಡಿ ಮುಕ್ಕುತಿವೆ.

ನಿನ್ನ ಮಾಡಿದ ಬುದ್ಧಿ-
ವಂತರೇ ಕಂಡಿಹರು.
ಯಾವ ಕಡಲನು ಕುಡಿದು
ಹಾವಕೊಬ್ಬನು ಹೊಂದಿ
ಮೆರೆಯುವಿಯೊ ಆದರ ತೆರೆ
ಗರಿತೆರೆದು ಹಗಲಿರುಳು
ಸಾರುತಿವೆ ' ನೆರೆಯಾಗಿ
ಬಾರದಿರೆ ಸಮ್ಮಾಣೆ! '

*      *      *      *

## ೬

ಬೊಂಬೆ!
ಘೋರ ಜೀವನ ಮರಣ
ಸಾರ ಚಿತ್ರನೆ, ಕ್ಷಮಿಸು.
ನಿನ್ನ ನಾ ಪ್ರೀತಿಸುವೆ
ನೀನೆನಗೆ ಬೇಕು ಬೇಕು
ನಿನ್ನ ಕಂಡರಿತೊಲಿವ
ತನ್ನ ತಾ ಕಾಣುವನು.
ನಿನ್ನ ದರ್ಪಣದಲ್ಲಿ
ನಾ ಜಗದ ಕತೆಯರಿತೆ:
ಮರಣಶಸ್ತ್ರವನೊಳಗೆ
ಅರಿಯದೊಲು ಒರಗಿಸಿಹ
ಅರಿದು ಒರೆಯೀ ಬಾಳು
ಇರುವನಕ ಮಿರುಗುವುದು
ಒರೆ ನಂಬಿ ಬೀಸಾಗಿ
ಮರೆವಾಗ ಒಳಕೈದು
ಬೇಕಾದ ಚಣದಲ್ಲಿ
ಸಾಕುಮಾಡಲುಬಹುದು.
ಅದಕೆಂದು ಭಯ ಬೇಡ.
ಬಂಟನಾಗಲುಬೇಕು
ಒರೆಯನೂ ಕೈದನೂ
ಮೀರಿರುವ ಹಿರಿಬೆಳಕ
ಸೇವೆಯಲಿ ಕೊನೆವರೆಗು
ಜೀವಯಾತ್ರೆಯ ಪಥಿಕ-
ನಾಗಿ ಸಾಗಲುಬೇಕು
ಯೋಗವಿದು ಎನಬೇಕು
ಏಕಾಕಿ, ಕರ್ಮವಶ
ಲೋಕದಲಿ ಇರುವನಕ
ವಿಶ್ವಮಯನೂ ಆಹುದು
ವಿಶ್ವಾಸವನು ಪಡೆಯೆ '
ಎಂದೆನಿತೊ ಮಾತುಗೈ
ಹೊಂದಿ ಸಿಲುಕದ ಮಾತು
ನಿನ್ನಿಂದ ಅರಿತೆ ಬೊಂಬೆ
ನಿನಗೊಂದು ನಮನ ಎಂಬೆ!

# ಅಳಿಗಾಲ

ಅಳಿಗಾಲ ಬಂದಿದೆ
ಅಳುಗಡಲು ನಿಂದಿದೆ
ತೆರೆಯಲ್ಲಿ ಮರೆಯಲ್ಲಿ.
ಬೆಳಸುವೆವು ಬಾಳುವೆಯ
ಎಳದಾದ ಬಳ್ಳಿಯನು
ಎನ್ನುವರ ಬಳಲುವರ
ಕಣ್ಣೀರ ತೊರೆಗೂಡಿ
ಇಂತಿಂತು ಗುಡುಗಾಡಿ:–
‘ ಮುಳುಗಿಸುವೆ ಬಳಗವನು
ಅಳಿಯಿಸುವೆ ಗೆಳೆಯರನು
ಉಳಿಯಿಸುವೆ ಬರಿಯ ಕೊಳ-
ಗುಳಕೆಳಪ ಹುಳುಗಳನು ’
‘ ಕಳೆಯುವೆನು ಕಲೆಗಳನು
ಹಿಳಿಯುವೆನು ಸರಸತಿಯ
ಬಳಿಯುವೆನು ಮಸಿಯನ್ನು
ನಲುಮೆ ಚೆಲುವಿನ ನೆಲಕೆ ’
‘ ತುಳಿಯುವೆನು ತತ್ತಳದಿ
ಒಳಿತು ನಡೆಯುಡುಗಣವ
ಎಳೆಯುವೆನು ಎನ್ನೊಳಗೆ
ಸುಳಿಸುಳಿಯುವ ಬಯಲುಗಳ ’
‘ ಕೀಳುವೆನು ದೈವಿಕದ
ಹಾಳುಕಳೆ ರವಿಯನ್ನು
ತೂಳುವೆನು ಲೌಕಿಕದ
ಗೋಳಿಡುವ ಚಂದ್ರನನು ’
‘ ಹೊಳೆಯುವೆನು ನಾನೊಬ್ಬ
ಕಲಿಯುಗದ ಹಿರಿದೊರೆಯು
ಬೆಳೆಯುವುದು ನನ್ನ ಬೆಳೆ
ಇಳೆಯ ಕಣಕಣದೊಳಗೆ ’

# ಬಯಲಾಯ್ತು !

ಬೇಡಿದ್ದು ಬಯಲಾಯ್ತು ಬಯಸಿದ್ದು ಕನಸಾಯ್ತು
ಹಾಡಿದ್ದು ಹಳಗತೆಯ ಹಿರಿಮರುಳ ಕಂತೆಯಾಯ್ತು !
ನೋಡುನೋಡುವ ಗಳಿಗೆಯೊಳು ಕೈತಳದಿ ಜಾರಿ
ಮೋಡದಲಿ ಮರೆಯಾಯ್ತು ಭಾವನೆಯ ದಿವ್ಯಯಾನ !

ಸುಳಿಯೆಲರು ಕಲೆತಂದ ನೆಲಹೂವ ಸರುಗಂಪು
ಬೆಳೆಬೆಳೆದು ಬಯಲಲ್ಲಿ ಗುಡಿಯೊಂದ ಕಟ್ಟುತಿರೆ
ಇಳೆಯ ನಾಸಿಕವೆಲ್ಲ ಬೆರಗುಸಿರಿ ಸವಿಯುತಿರೆ
ಕಳೆದುಹೋಯ್ತೆಂತೇನೊ ಸುರಭಿಸುಮಸಂಕುಲವು !

ಜನ್ಮಜನ್ಮದಿ ನೆರೆತ ಜೀವಭಾವಗಳೆಲ್ಲ
ಮೃಣ್ಮಯದ ಸೀಮೆಯಲಿ ಅಮೃತಮಯ ಮೂರ್ತಿಯಸು
ನಮ್ಮದತಿಮಾನುಷವು ನೋಡೆಂದು ರಚಿಸುತಿರೆ
ಬಿಮ್ಮನೆಯೆ ಬಿರಿದೊಡೆಯಿತೈ ಕಲ್ಪನೆಯ ಶಿಲ್ಪ !

# ಪ್ರತಿಜೀವ

ಪ್ರತಿಜೀವವು ತಾ ಭೀಕರ ಶಂಕರ-
ಭವ್ಯಭಯಾನಕ ರೂಪವ ತಾಳಿಹುದು.
ಪೃಥಿವಿಯ ಹೆಸರಿನ ಮಸಣದ ಮಧ್ಯದಿ
ಮುಸುಗುಟ್ಟುತ ಮಿಸುಕಾಡುತಲಿಹುದು.

ಹಗಲಿರುಳೆಂಬೊಂದೊಂದೇ ಇರುಳಲಿ
ಜೀವನ್ಮರಣದ ಪ್ರೇತಾವಸ್ಥೆಯಲಿ
ಜಗದೊಳಗಿನ ನಗೆ ಸೊಗ ಸಂತಾನವ
ಹುಗಿದದರಾಶಾಭೂತಗಳೊಡಗೂಡಿ.

## ಪ್ರತಿಜೀವ

ತೊಡಕಿನ ಹಿಡಿಗಳ ಗೂಡೆಂಬುವ ತಲೆ-
ಕೂದಲ ಜಡೆಗಳು ಭೂಮಿಯ ಸೀಳುತಿವೆ.
ಕೆಡಕಿನ ಬಾಯಿಂದೂದುವುಸಿರ್ಗಳು
ಬೆಳಕಿನ ಬಳಗವ ಕಪ್ಪಿಸಿ ಕೀಳುತಿವೆ.

ತಾನುರಿಗಣ್ಣೊಳು ಭಸ್ಮವ ಮಾಡಿದ
ಪ್ರೇಮ-ಕಾಮಗಳ ಬೂದಿಯು ಮೈಗೆರೆದು
ಧ್ಯೇಯ-ಶ್ರೇಯಗಳ ಖಂಡಿಸಿಯವುಗಳ
ರುಂಡಮಾಲೆಗಳ ಕೊರಳಲಿ ತೂರಿಹುದು.

ವೈಷಮ್ಯದ ನಿಷ್ಕಾರುಣ್ಯದ ವಿಷ-
ದ್ಹಲ್ಲೆರಡಾಡುವ ಹಾವಿನ ಮೋಹರವ
ಭೀಷಣರಕ್ತಾಲೇಪಿತ ದೇಹದಿ
ಸುಳಿದಾಡಲು ಸುತ್ತಾಡಲು ಬಿಟ್ಟಿಹುದು.

ಬಾಳುವೆ ಸುಡುವೆಸು ಬಾಳುವೆ ಒಲ್ಲೆಂ-
ದೊದರುವ ಡಮರುವಿನಾರ್ತಸ್ವರಗಳಲಿ
ಕಾಳನ ನುಂಗುವ ಹಾಸ್ಯದ ಲಾಸ್ಯದಿ
ಕುಣಿಯುವುದೆತ್ತೆತ್ತಲೊ ಕಾಲೊಗೆಯುತಲಿ.

ಹಿಂಸಾನಂದದಿ ಲಯಸಂತೋಷದಿ
ಸಿಕ್ಕಿದ ಬೇಟೆಯ ಜೀವವ ಕೊಳ್ಳುತಿದೆ
ಹಿಂಸೆಯ ಕುರುಹಿನ ಚರ್ಮವ ಸೊಂಟಕೆ
ಸುತ್ತುತ ಸುಡುಗಾಡೊಡೆಯನ ಹೋಲುತಿದೆ.

# ಕಲ್ಪಾಂತ ರಾತ್ರಿ

ಕಾಲರಾಜನ ಮುಕುಟರತ್ನಗಳು ತಾರೆಗಳು
ಭಾಲದೇಶದಿ ಮಿರುಗಿ ಸಾಲುಸಾಲಾಗಿಹವು
ಬಂತೇನೊ ಕಲ್ಪಾಂತ ರಾತ್ರಿ !

ಕತ್ತಲೆಯ ಹಿರಿಗಡಲು ಹಿರಿದಾದ ಬಾಯ್ತೆರೆದು
ಮುತ್ತುಗಳ ನುಂಗಿದೊಲು ಸವಿಬಾಳ ನುಂಗಿಹುದು
ಬಂತೇನೊ ಕಲ್ಪಾಂತ ರಾತ್ರಿ !

ನೇಸರನ ಹೊಳಹಿಲ್ಲ ತಿಂಗಳನ ನಗೆಯಿಲ್ಲ
ಗಾಸಿಯಾಗಿದೆ ಜಗವು ಕತ್ತಲೆಯ ಮಂದಿರದಿ
ಬಂತೇನೊ ಕಲ್ಪಾಂತ ರಾತ್ರಿ !

ಎನಿತಿರುಳು ಕಾಡಿಗೆಯು ಕಣ್ಣಮಬ್ಬನು ತರೆಯು
ಮನದ ಒಳಗಣ ಜೋತಿ ಜೀವರಾಶಿಗೆ ಇಲ್ಲ
ಬಂತೇನೊ ಕಲ್ಪಾಂತ ರಾತ್ರಿ !

ಬೇಡಾದ ಬರಡಾದ ಕತ್ತಲೆಯ ಹಗೆಯುದಲಿ
ಬೇಡಿಗಳ ತೊಡಿಸಿರುವ ತೆರ ನಾವು ನಿಂತಿಹೆವು
ಬಂತೇನೊ ಕಲ್ಪಾಂತ ರಾತ್ರಿ !

# ಇಂಥಾ ಜನ್ಮ ನೋಡೊ !

( ಕುರುಡ ತಿರುಕನ ಬಿಕ್ಕೆ ಹಾಡು )

ಇಂಥಾ ಜನ್ಮಾ ನೋಡೋ
ಧರ್ಮಾ ಮಾಡೊ
ಮುತ್ತುರತನಾ ಬ್ಯಾಡೋ
ಕಾಸೊಂದs ನೀಡೊ.

ಎಂದಿನಿಂದ ಜೀವಾ,
ಕಾಡಲು ದೇವಾ
ಕೊಟ್ಟಿರಲು ನಾವಾ,
ಮುಟ್ಟಬೇಕs ಸಾವಾ.

ಎಂಥಾ ದೇಹ ನೋಡೊ,
ಮರುಳು ಮಾಡೋ
ಎಂಥಾ ಸ್ನೇಹ ನೋಡೊ,
ಒಟ್ಟುಗೂಡೋ

ನಾನು ಕುರುಡಾ ಹೌದೋ,
ನಿನ್ನ ಬಂಧೋ !
ದಾನಾ ಕೊಡದೆ ಹೋದ್ಯೋ,
ನೀನೂ ಕುರುಡೋ !

# ಬಡವರ ಹಾಡು

ದೈವsದ ಮುನಿಯೊಂದು ಕಬ್ಬಿಣದ ಬಾಕsಲ ।
ಹುಲಿಯಂತ ಜನರು ಹಾದಾರು । ತೆರಿಲಿಲ್ಲ ।
ತಾನ ತೆರದಾಗ ತೆರಿಬೇಕ ॥

ದೈವುಳ್ಳ ಗೌಡsರು ಪುಣ್ಯೇವ ಮಾಡ್ಯಾರ ।
ದೈವಾದ ಮುನಿಯು ತೆರದಾಗ । ತಾವ್ಹೋಗಿ ।
ಬಂಗಾರ ಹಿಡಿಯು ತಂದಾರ ॥

ಬಡವsರು ನಾವೆಲ್ಲ ಬಡಕೊಂಡು ಅತ್ತsರು ।
ಹಿಡಿಮಣ್ಣು ಇಲ್ಲ ಸುಡಗಾಡ । ದೈವಾದ ।
ಬಡಿವಾರ ಏನು ಹೇಳಲೆ ॥

ಮೈಮುರಿ ದುಡಿಯೋರು ಹೊಲದಾಗ ಎಲ್ಲ ನಾವ
ಮತ್ತೊಬ್ಬ ಬಾಯಿ ತೆರದಾಗ । ಸಮ ಹಾಡು ।
ಬೀಸುವಕಲ್ಲ ಬರಿ ಹಾಡ ॥

ಕೊಟ್ಟಾಗ ತಿನ್ನೋಣ ಕೈತುಂಬ ಕಾಳಾಗಿ ।
ಮಣ್ಣಾsನು ಕೊಟ್ಟ ಸಿವ ತಾನು । ಹೊನ್ನಾವ ।
ಕೊಡದೆಲ್ಲ ಓಡಿ ಹೋಗ್ಯಾನು ॥

# ಆಸೆ

ಆಸೆಯೆಂಬ ಈಸುಗಾಯಿ-
ಯಾಸರಾಗಿ ಲೇಸು ಬಯಸಿ
ಈಸುತಿರುವ ಜೀವರಾಶಿ
ನಾವು ಇಹೆವು ಸಾವುಹೊಳೆಯಲಿ. ಪ.

ಎಂದೊ ಏನೊ ಮುಂದೆ ಬರುವ
ಚೆಂದದಡದ ಬಳ್ಳಿ ಹೂವ-
ನಿಂದು ನೆನೆದು ಮೂಸಿ ನಗುತ
ನಾವು ಇಹೆವು ಸಾವುಹೊಳೆಯಲಿ.

ಹಿರಿಯ ತೆರೆಯು ಮುಣುಗಿಸುತಿರೆ
ಕರಿಯ ಮೊಸಳೆ ನೊಣೆಯುತಿರಲು
ಬರುವ ಆಸೆಯೊಂದೆ ನಂಬಿ
ನಾವು ಇಹೆವು ಸಾವುಹೊಳೆಯಲಿ.

ಗಾಸಿಗೈವ ಬಾಳು ಇರಲಿ
ಲೇಸು ಎಂಬುದಿರಲಿ ಮುಂದಿ-
ನಾಸೆಯೆಂಬ ಪಾಶದಲ್ಲಿ
ನಾವು ಇಹೆವು ಸಾವುಹೊಳೆಯಲಿ.

ಮೇಲು ಏನು, ಕೀಳು ಏನು,
ಸಾಸಿರಾಸೆಗಳಲಿ ಲೇಸು-
ಗೆಲವು ಕಂಡು ಸೋಲು ಮರೆತು
ನಾವು ಇಹೆವು ಸಾವುಹೊಳೆಯಲಿ.

# ಏಕೆ ?

ರೆಕ್ಕೆಯಿರದ ಹಕ್ಕಿಗೇಕೆ ಹಾರುವಾಸೆಯೊ
ಚರಣಗಲಿತ ಹರಿಣಕೇಕೆ ಓಡುವಾಸೆಯೊ
ಮೊರಡು ಆದ ಮರಕೆ ಏಕೆ ಬೆಳೆವ ಬಯಕೆಯೊ
ಬಲವೆ ಇರದ ಒಲವಿಗೇಕೆ ಬಲಿವ ಬಯಕೆಯೊ.

ನೆಲವೆ ಹುಳಿತ ಹೊಲಕೆ ಏಕೆ ತೆನೆಯ ವಾಂಛನೆ
ಊಟೆಯಿರದ ತೋಟಕೇಕೆ ಫಲದ ವಾಂಛನೆ
ಕಳಚಿ ಕೊಳೆತ ಬಳ್ಳಿಗೇಕೆ ಹೂವ ಹಂಬಲೊ
ಬಲವೆ ಇರದ ಒಲವಿಗೇಕೆ ಬಲಿವ ಹಂಬಲೊ.

ಉಸಿರು ತಡೆದ ಶಿಶುವಿಗೇಕೆ ಬದುಕುವಿಚ್ಛೆಯೊ
ಸಾವು ಕರೆದ ಜೀವಕೇಕೆ ಬಾಳುವಿಚ್ಛೆಯೊ
ಮರವು ಮುಸುಕಿದಿರವಿಗೇಕೆ ಅರಿವ ಹವಣಿಕೆ
ಬಲವೆ ಇರದೆ ಒಲವಿಗೇಕೆ ಬಲಿವ ಹವಣಿಕೆ

ಹುಳವು ತಿಂದ ಮೊಳಕೆಗೇಕೆ ಚಿಗಿವ ಕೋರಿಕೆ
ಮಲಿತ ತೊರೆಯ ಜಲಕೆ ಏಕೆ ಹರಿವ ಕೋರಿಕೆ
ತಿಳಿವು ಇದ್ದು ಕಳೆಯು ಇರದ ನರನ ಬಾಳೊಳು
ಬಲವೆ ಇರದ ಒಲವಿಗೇಕೆ ಬಲಿವ ಹಂಬಲು.

# ಹೆಂಡಽತಿ ಆಗುವಾ ಹೆಂಗಽಸೆ ಕೇಳ

ಗಂಡನೆಂಬುವ ಹೊಳೆಗೆ
ನಿನ್ನ ಜೀವದ ತೊರೆಯು
ತುಂಬು ನೆರೆಯಾಗಿ ಹರಿದು ಬೆರಿಬೇಕ ಕೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ನಿನ್ನ ಜೀವದ ಒಳಗೆ
ಅಕ್ಕರೆಯು ಸಕ್ಕರೆಯು
ಸವಿಸೂರೆಮಾಡಿ ದೊರೆ ಕಳುಹ್ಯಾನ ಕೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ಗಂಡಽನ ಎದೆನೀರ
ಕಸರೆಲ್ಲ ಕಳೆಯುವ್ವ
ಸವುಳೀನ ನೀರೀಗೆ ಸವಿ ನೀಡು ಕೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ನೀವಿಬ್ಬರೊಡಗೂಡಿ
ಪ್ರೀತೀಲಿ ತುಳುಕಾಡಿ
ದೇವೆಂಬೊ ಕಡಲೀಗೆ ಕೂಡೀರಿ ಕೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ಗಂಡಽನ ನೆನೆಯುದೆ
ಸೇವೇಯು ಮಾಡದೆ
ಕಂಡರು ಮೋಕ್ಷವು ಆದು ಕೆಂಡ ಕೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ಗಂಡಽನ ಒಡನಾಟ-
ವಾಡದೆ ಕಂಡವರ
ಕಾಲ್ತೊಳೆದು ಫಲವೇನು ನೀರಾಟ ಕೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ಗಂಡಽನ ಮುತ್ತೊಂದು
ತಳೆಯುಽದೆ ತುಟಿಮ್ಯಾಲೆ
ದುಂಡನ್ನ ಮುತ್ತಿನ ಸರಕ್ಯಾಕೆ ಹೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ಗಂಡಽನ ಚಿನ್ನಽದ
ಮೈಯುಪ್ಪಿ ನಲಿಯುಽದೆ
ನೂರೆಂಟು ಚಿನ್ನದ ಒಡವೇಕೆ ಹೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ಗಂಡನ ಮನೆಹೊಕ್ಕು
ಮನಹೊಕ್ಕು ತಿಳಕೊಂಡು
ನಡಿಬೇಕ ಕೆಡಕೆಲ್ಲ ಕಳಿಬೇಕ ಕೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ಗಂಡಽನೆ ಪರದೈವ,
ಗಂಡಽನೆ ಪರಮೇಶ
ಎಂದರಿದು ನಡಿಲಾಗ ನೀ ಗೌರಿ ಕೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

# ಗಂಡನಾಗುವ ಜಾಣ

ಗಂಡನಾಗುವ ಜಾಣ
　　ಕಂಡಿತದ ನುಡಿ ನಾಲ್ಕು ಹೇಳುವೆನು ಕೇಳು.

ಹೆಂಡತಿಯು ಹಿರಿಗೆಳತಿ
　　ಗಂಡಸಿನ ಬಾಳುವೆಗೆ ಸವಿಜೋಡು ಕೇಳು.

ಒಲವು-ಗೊಡ ತುಳುಕಿಸುತ
　　ನಲ್ಲನೆರೆಯಲು ಬರುವ ಜೀವಸಖಿ ಕೇಳು.

ತನ್ನ ಬಾಳಿನ ಬಳ್ಳಿ
　　ನಿನ್ನ ಮರದಲಿ ಬೆಳಸಬಂದಾಕೆ ಕೇಳು.

ಪ್ರೀತಿ-ಗಂಧವ ತಂದ
　　ಇಂಥ ಈ ಹೂವನ್ನು ಕಾಪಾಡು ಕೇಳು.

ಸೊತ್ತೆಂದು ತೊತ್ತೆಂದು
　　ಮತ್ತಮದಗಜದಂತೆ ತುಳಿಯದಿರು ಕೇಳು.

ಅರಿವನೀಯದೆ ಬರಿದು
　　ಅರಿವಿಲ್ಲ ಎಂದಂದು ಜರೆಯದಿರು ಕೇಳು.

ಗಂಡಽನ ನೆನೆಯುದೆ
ಸೇವೇಯು ಮಾಡದೆ
ಕಂಡರು ಮೋಕ್ಷವು ಅದು ಕೆಂಡ ಕೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ಗಂಡಽನ ಒಡನಾಟ-
ವಾಡದೆ ಕಂಡವರ
ಕಾಲ್ತೊಳೆದು ಫಲವೇನು ನೀರಾಟ ಕೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ಗಂಡಽನ ಮುತ್ತೊಂದು
ತಳೆಯುಽದೆ ತುಟಿಮ್ಯಾಲೆ
ದುಂಡನ್ನ ಮುತ್ತೀನ ಸರಕ್ಯಾಕೆ ಹೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ಗಂಡಽನ ಚಿನ್ನಽದ
ಮೈಯುಪ್ಪಿ ನಲಿಯುಽದೆ
ನೂರೆಂಟು ಚಿನ್ನದ ಒಡವೇಕೆ ಹೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ಗಂಡನ ಮನೆಹೊಕ್ಕು
ಮನಹೊಕ್ಕು ತಿಳಕೊಂಡು
ನಡಿಬೇಕ ಕೆಡಕೆಲ್ಲ ಕಳಿಬೇಕ ಕೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ಗಂಡಽನೆ ಪರದೈವ,
ಗಂಡಽನೆ ಪರಮೇಶ
ಎಂದರಿದು ನಡಿಲಾಗ ನೀ ಗೌರಿ ಕೇಳ
ಹೆಂಡಽತಿ ಆಗುವಾ ಹೆಂಗಽಸೆ ಕೇಳ.

ಹೊಗೆಯಾಟ ಅವಳಿಗೇ
ನಗೆನಲಿವು ನಿನಗೆಂದು ತಿಳಿಬೇಡ ಕೇಳು.

ಗೆರೆ ಹಾಕಿ ಒಲೆ ಹಾಕಿ
ಸೆರೆಯೊಳಗೆ ಇಟ್ಟಂತೆ ಇಡಬೇಡ ಕೇಳು.

ಅವಳ ಜೀವದ ಒಳಗೆ
ಹವಳಕುಡಿ ಕೆಂಬೆಳಕು ಕಾಣಯ್ಯ ಕೇಳು.

ಅದರ ಕಿರಣದ ಕೊರಳು
ಒದರುತಿದೆ 'ಹೊರಬಿಡಿರಿ' ಎಂದೊಸೆದು ಕೇಳು.

ಅವಳಿಗೂ ಹಾರೈಕೆ-
ಹವಣಿಕೆಯ ಬಾಳುವೆಯು ತಂದು ಕೊಡು ಕೇಳು.

ತಿಳಿಯದಲೆ ಕೇಳದಲೆ
ತಿಳಿಗಣ್ಣು ಕಳೆಕೊಂಡು ನಡೆವಾಗ ಕೇಳು.

ಯಮನಂತೆ ದಂಡಿಸದೆ
ಅಮಿತಪ್ರೀತಿಯು ದೇವದೊರೆಯಾಗು ಕೇಳು.

ನೂರು ತಪ್ಪಿನ ತಿಪ್ಪೆ
ನೀನಿರಲು, ದಂಡಿಸುವ ಹಕ್ಕೆಲ್ಲಿ? ಕೇಳು.

ಗಂಡು-ಹೆಮ್ಮೆಯ ಸುಟ್ಟು
ಹೆಣ್ಣುಜೀವದ ವಿನಯ ತೊಡಬೇಕು ಕೇಳು.

ಕಸರಿರುವ ಹೊಳೆಯೆರಡು
ಹಸನಾಗಿ ಹರಿದಾಡೆ ಹವಣಿಸಿರಿ ಕೇಳು.

ಹಿರಿದು ಕಿರಿದನು ತೊರೆದು
ಹಿರಿಯೊಡೆಯನನು ನೆನೆದು ಬೆರೆಬೇಕು ಕೇಳು.

ಬೆರಕೆಯೋ ಬಾಳ ಸವಿ
　　ಬೆರಕೆಯಿಲ್ಲದ ಬಾಳ್ವೆ ಹಿರಿನರಕ ಕೇಳು.

ಬೆರಕೆ ತಾರದ ಬಾಲೆ
　　ಧರಿಸೆ ಪ್ರೀತಿಯ ಮಾಲೆ ಜರೆಯುವಳು ಕೇಳು.

ಪ್ರೀತಿ ಬೇಕೇಬೇಕು
　　ಪ್ರತಿಕ್ಷಣವು ಪ್ರೀತಿಯುಸಿರಾಡುತಿರು ಕೇಳು.

ನಿನ್ನ ಉಸಿರಿಗೆ ತಿರುಗಿ
　　ನಂಜು ಬಂದರು ಪ್ರೀತಿಯನು ಊದು ಕೇಳು.

ನಂಜು ಹೆಸರಿಗೆ ನಂಜು
　　ಅಂಜದರ ಬಾಯೊಳಗೆ ಸುಧೆಯ ಸವಿ ಕೇಳು.

ಗಂಡನೆಂದರೆ ತನ್ನ
　　ಹೆಂಡತಿಯ ಹಗೆ ಗೆಲುವ ಕಲಿಯಲ್ಲ ಕೇಳು.

ಗಂಡನೆಂದರೆ ನಲ್ಲ
　　ಗಂಡನೆಂದರೆ ಪ್ರೀತಿಯಲಿ ಶೂರ ಕೇಳು.

ನಲ್ಲೆಯೊಲುಮೆಯ ನಾಡ-
　　ನೊಲವಿಂದ ಗೆಲುವಾತ ನಿಜ ಗಂಡ ಕೇಳು.

ಆಗುವೊಡೆ ಈ ಗಂಡ-
　　ನಾಗು ನೀನಿಲ್ಲದಿರೆ ಬರಿ ಹಾಳು ಕೇಳು.

ಗಂಡನಾಗುವ ಮೊದಲು
　　ಹೆಂಗರುಳ ಹೊಳೆಯಲ್ಲಿ ಮುಳುಗಿ ಬಾ ಕೇಳು.

ಗಂಡನಾಗುವ ಜಾಣ
　　ಕಂಡಿತದ ನುಡಿ ನಾಲ್ಕು ಹೇಳುವೆನು ಕೇಳು.

# ಗೆಳೆತನದ ಗೀತ

ಬಾಳೋಣ ಕೂಡಿಯೇ ಗೆಳೆಯರೇ ನಾವೆಲ್ಲ ಪ.

ಬಾಳುವೆಯ ಕುಲುಮೆಯಲಿ ಕಿಡಿಯಾಗಿ ಸಿಡಿದರೂ
ಬೀಳೋಣ ಏಳೋಣ ಜೊತೆಯಾಗಿಯೇ ! ಅ. ಪ.

ಹತ್ತು ಜನ್ಮದ ನೇಹ ನೆರೆಯಾಗಿ ಕರೆದಂತೆ
ಹತ್ತುಗಡೆ ಯಾವುದೋ ಹತ್ತಿರಕೆ ತಂದಿರಲು
ಪ್ರೇಮದಿಂದಲೆ ಬಾಳು ಕಟ್ಟಿ ತೋರುವೆವೆಂಬ
ಆ ಮೊದಲ ಅಕ್ಕರೆಯ ಉಕ್ಕೇರು ಇರುತಿರಲು

ಅನುಭವದ ಬಿಸಿಯೊಂದಿ ಅತ್ತಿತ್ತ ಸಾರಿದರು
ಅನುನಯದ ತಂಪುಂಡು ಹೊಸದಾಗಿ ಬೆರೆಯ ಒರೆ
ಕಾಡುಬೆಳದಿಂಗಳೆನುವುದೆ ನಮ್ಮ ಬಾಳುವೆಯ
ಕಾಡಿನಲಿ ಕೂಡ ಬೆಳದಿಂಗಳಿದೆ ಎನ್ನದೆಯೆ !

## ಗೆಳೆತನ

ಬಾಳುವೆ-ಬೇವಿನ
ಮರದಡಿಯಲ್ಲಿ
ಗೆಳೆತನ-ಸೀಯುಸು
ಕಂಡೆವು ನಾವು । ರಾಮಾ । ಉಂಡೆವು ನಾವು ॥

ಕರೆಯುತ ತೊಡೆಯಲಿ
ಕೂಡಿಸಿ ಮರವು
ನೆರಳನು ನೀಡಿತು
ಎಂದೆವು ನಾವು । ರಾಮಾ । ನಿಂದೆವು ನಾವು ॥

ತಂಗಾಳಿಯು ಸವಿ-
ಸೊಗಸನು ಸವಿದು
ಬೆಳಗಿನ ಜಾವದಿ
ಕುಣಿದೆವು ನಾವು । ರಾಮಾ । ತಣಿದೆವು ನಾವು ॥

ಬಾಳಿನ ಬೇರದು
ಒಂದೆಂದರಿದು
ಹಿರಿಹಿರಿ ಹಿಗ್ಗುತ
ಬೆರೆತೆವು ನಾವು । ರಾಮಾ । ಮರೆತೆವು ನಾವು ॥

ಎಲ್ಲೆಡೆ ಸೂಸುವ
ಒಲವಿನ ಗಾಳಿಯು
ನಮ್ಮನು ನಲಿಯಿಸೆ
ಅಪ್ಪಿದೆವಾವು । ರಾಮಾ । ಒಪ್ಪಿದೆವಾವು ॥

ಬೇವಿನ ಸೆಲೆಯನು
ಸೀಗಡಲೆಂದು
ಎಳತನದರಿತಕೆ
ತಿಳಿದೆವು ನಾವು । ರಾಮಾ । ಸುಳಿದೆವು ನಾವು ॥

ಎಂದಿನ ಮರವೋ
ಎನಿತಿದರೊಲವೊ
ಎನ್ನುತ ಗಾನದಿ
ನಲಿದೆವು ನಾವು । ರಾಮಾ । ಕೆಲೆದೆವು ನಾವು ॥

ಅರಿವಿಲ್ಲದ ಆ-
ನಂದದ ಬೆಳಗು
ಸರಿಯಲು ಕಣ್ಣನು
ತೆರೆದೆವು ನಾವು । ರಾಮಾ । ಜರಿದೆವು ನಾವು ॥

ನೇಸರನೇರಲು
ಬಿಸಿಬಿಸಿ ಗಾಳಿಯು
ಬೀಸಲು ಭೋರೆನೆ
ನೆಗೆದೆವು ನಾವು । ರಾಮಾ । ಬಗೆದೆವು ನಾವು ॥

## ಗೆಳೆತನ

ಕೂಟದ ಸಿಹಿಯುಲಿ
ಆಗಲಿಕೆ-ಕಹಿಯನು
ಬೆರಸುವ ಬೇವನು
ಪಡೆದೆವು ನಾವು । ರಾಮಾ । ತಡೆದೆವು ನಾವು ॥

ಬೇವನು ಬೇವೆನೆ
ಬೇಗನೆ ಅರಿತೆವು
ಬೇವಿನ ಸೀಯನು
ಸವಿದೆವು ನಾವು । ರಾಮಾ । ಸವಿದೆವು ನಾವು ॥

ಬೇವಿನ ಕಹಿತನ-
ವೆಂದಿಗು ನಮ್ಮನು
ಬೇರಾಗಿಸದೊಲು
ಬೆರೆತೆವು ನಾವು । ರಾಮಾ । ಅರಿತೆವು ನಾವು ॥

ಬೇವಿನ ಹೂವೆಲೆ-
ಕಾಯಿಯ ಒಗರನು
ಗೆಳೆತನವಾಟದಿ
ಕಳೆವೆವು ನಾವು । ರಾಮಾ । ಹೊಳೆವೆವು ನಾವು ॥

ಎಳತನ ಗೆಳೆತನ
ಮುಕ್ತಿಗೆ ಸೋಪಾನ
ಎನ್ನುತ ದೇವನ
ನೆನೆವೆವು ನಾವು । ರಾಮಾ । ದಣಿಯೆವು ನಾವು ॥

ಬಾಳುವೆ-ಬೇವಿನ
ಮರದಡಿಯಲ್ಲಿ
ಗೆಳೆತನ-ಸೀಯನು
ಕಂಡೆವು ನಾವು । ರಾಮಾ । ಉಂಡೆವು ನಾವು ॥

# ಗೆಳೆಯನಿಗೆ

ಗೆಳೆಯ, ಜೀವದ ಬೆಳೆಯ
ಬೆಳೆಯಲಿಕೆ ಸಾಗಿರುವೆ
ಹಿರಿಯ ನಲುಮೆಯ ಮಳೆಯ
ಕರೆಯುವೆವು ಕಳೆಯೇರು !

ಹಿರಿತನದ ಉಸಿರೊಂದಿ
ಅರಿಯದೆಳಸಸಿಯಾಗಿ
ನೆಲದ ಮರೆಯಲಿ ಬಾಳಿ
ಎಲೆ-ಹಸಿರು ಪಡೆಯುತಿರೆ
ಬಿರುಗಾಳಿಯೊಡ ಬಂದ
ಕರೆಗೆ ದೀಂಕಿಡುತಿದ್ದೆ
ಹಿರಿಯ ತಾಳೆಯ ತೆರದಿ
ಹಿರಿದಾಗಿ ಬೆಳೆಬೆಳೆದೆ!

ಚೆಲುವ ದೇವಿಗೆ ಒಲಿದೆ
ಒಲವ ನೀಡಿದೆ ಪಡೆದೆ
ನಲಿದು ದೈವದ ದೂತಿ
ಜಸಗೊಡೆಯ ಹಿಡಿದಿರಲು
ಗೆಲವು-ಗುದುರೆಯನೇರಿ
ಹಲವು ಲೋಕಗಳಲ್ಲಿ
ಅಲೆದಾಡಿ ಕವಿಜೀವ-
ದಲೆಯಲೆಯ ಚಿಮ್ಮಿಸಿದೆ !

ಕನ್ನಡದ ಬಡಮೈಯು
ತನ್ನ ತಾರಿದ ಬಾಯ
ಇಂದು ಸೊರಗಿದ ಕೈಯ
ಮುಂದಿರಿಸಿ ಕರೆಯುತಿದೆ :
" ನೀರ ದಾರಿಯ ದಾಟಿ
ನೂರು ಭಾವಗಳುಂಡು
ಸಾರಿ ಬಾ ! ಮರಳಿ ಬಾ !
ಬೀರಿಲ್ಲಿ ! ನಾಡಿನಲ್ಲಿ ! "

# ಪ್ರಹ್ಲಾದ!

ಇದುವೆ ನಿಜ ಜಗದಲ್ಲಿ
ಪ್ರಹ್ಲಾದ! ಆಹ್ಲಾದ!
ಆತ್ಮತತಿ, ಆನಂದ
ಮಧುಪಗಣ, ಮಕರಂದ
ಬುವಿತಾಯಿ, ಸವಿಸೊಂಪು
ಗಾಳಿದೊರೆ, ತನಿಗಂಪು
ಎಲ್ಲೆಡೆಗೆ ಆನಂದ
ಸವಿಯುವುದೆ ಹಿರಿ ಚೆಂದ.
ಗೋಲಗಣ ಕೋಟಿಯಲಿ
ತಣಿವು ತೊರೆ ಹರಿಯುತಿದೆ
ಇಲ್ಲಿ ಈ ಇಳೆಯಲ್ಲಿ
ಮರಿಮಂಚ ತೂಗಿನಲಿ
ಯಾಕೆ ಈ ಹೊಯ್ದಾಟ?
ಯಾಕೆ ದುಃಖದ ಕಾಟ?
ಯಾಕೆ ಕಣ್ಣೀರ ನೆರೆ?
ಕಳವಳದ ಬಾಳ ಸೆರೆ?
ಮಿಂಚಿನಿರವುಗಳಲ್ಲಿ
ಸಂಚಯದ ನೋವೇಕೆ?
ಇಲ್ಲಿಲ್ಲ, ಸುಳ್ಳಿಲ್ಲ!
ಇರುವುದೊಂದಾನಂದ
ತಾಳದನು ಬಾಳದಕೆ
ಬಾಳ ಹೊಸ ಜೊತೆಯಲ್ಲಿ
ಪ್ರಹ್ಲಾದ! ಆಹ್ಲಾದ!
ಹೃದಯವೊಪ್ಪಿದ ಹೃದಯವೇ!

# ಗೆಳೆಯನಿಗೆ

ರಾಮ ಚೈತನ್ಯವೇ ಪ್ರೇಮ ಪೀಯೂಷವೇ
ನಿನಗಿರಲಿ ಎಲ್ಲ ಸವಿಸಿರಿ ತುಂಬಿದಾಯುಷವು !
ಸ್ನೇಹ-ಸಾರಾಯವೇ ಸರ್ವಗನ ಕಾರುಣ್ಯವೇ
ಉದಯಿಸಲಿ ನಿನ್ನ ಮನದನ್ನೆಯಲಿ ಒಲವಿನೊಲವು.

ದಿವ್ಯದರ್ಶನ ರಾಜ್ಯದಿದಿರು ನೀ ನಿಂತಿರಲು
ದ್ವಾರವನು ತೆರೆಯಬರಲೌ ನಿನ್ನ ನೇಹದರಸಿ.
ವರವಿತ್ತು ಮರೆಯಾಗಿ ಬರುತ ಹೋಗುವ ತಾಯ
ನಿಚ್ಚ ನಗೆ ಮುಗುಳಾಗಿ ನಿಲ್ಲಲೌ ನಿನ್ನ ರಾಣಿ.

ನಿಮ್ಮೆರಡು ಜೋಡಿಸಲಿ ಒಂದರಂದವ ಕಂಡು
ಜಗವು ಕೈ ಮುಗಿವಂತೆ ಬರಲವಳು ಸೊಗದ ಸೋನೆ.
ಗೆಳೆಯ ಆತ್ಮದ ಗೆಳೆಯ ಅಭಯನೆಂಬುವ ನಿನ್ನ
ಬಿರುದು ಬೆಳೆಯಿಸ ಬರಲಿ ಕರೆದೊಲಿದ ಹೃದಯರಾಣಿ !

# ಬೆಳೆಯುತಿದೆ !

ಬೆಳೆಯುತಿದೆ, ಎಲ್ಲವೂ ಬೆಳೆಯುತಿದೆ, ಲೇಸು-ಗೇ-
ಸೆಂಬ ಮಾತುಳಿ ಮರುಳೆ, ಬೆಳೆಯುತಿದೆ ಅದ ಕಾಣೆ !

ಬೆಳೆಯುತಿದೆ ಎನ್ನ ಈ ಮನೆಯ ಮರಿಜಗದಲ್ಲಿ
ಬೇನೆಬೇಸರಿನ ಹಿರಿಬೇಗೆ, ಇರುವಾಸೆಯುದ-
ರಲ್ಲಿ ಬೆಂದುಗುವ ಕಸಿವಿಸಿಯ ಕಣ್ಣೀರು, ಬಿಸಿ-
ಯುಸಿರು; – ಒಲವುಕ್ಕಿ ಗೈಯುವ ಸೇವೆ, ಹೊಲಸು ಹೊಳೆ-
ಯೊಳಗೊರಗಿ ತಾಳಿ ಬಾಳುವ ಬಯಕೆ, ಎಂದಿಗೋ
ಮುಂದೊಮ್ಮೆ ಒಳಿತು ಬಂದೀತೆಂಬ ಹಿರಿಯಾಸೆ !

ಬೆಳೆಯುತಿದೆ, ಅತ್ತ ಆ ಹಿರಿಯ ಹೊರಜಗದಲ್ಲಿ
ಹಸಿವು ರಕ್ಕಸಿಯುಡರಿ ರಸ ಹಿಂಡಿ ಹಸಿಪುಂಡು
ಹೊರಗೆಸೆದ ಕಸದ ತಿಪ್ಪೆಯ ಸಿಪ್ಪೆಯಂತೆ ಸೀ-
ರಾದ ಮೈಮನವು, ಚಣಚಣಕೆ ಸಾವಿಗವುತಣ; –
ನೆಲದಿ ನಾಕವು ಇಹುದು ನಿಜವೆಂಬ ದೇವ ಜೀ-
ವಿಗಳ ಜನಸೇವೆ, ಮುನ್ನೋಟ, ಮುನ್ನಡೆಸುಡಿಯು

ಬೆಳೆಯುತಿದೆ ಇದುವೆಲ್ಲ ತನ್ನೊಂದು ಲೀಲೆಯಲಿ
ಬೆಳೆಯಬೇಕೈ ನೀನು ಬೆರೆತು ಬಾಳುವ ಬಗೆಯೆ !

# ತಾಯೆ !

ತಾಯೆ ! ನಿನ್ನನು ಕಾಣದಾವುದೊ ತಾಣಕೊಯ್ದಿಹ
ಕಾಲಪುರುಷನು ಇಂದಿಗೆರಡನೆ ವರುಷಹೆಜ್ಜೆಯ-
ನಿಡುತಲಿರುವನು, ಉಸಿರು ಉಸಿರಿಗೆ ನನ್ನ ನೆನಹಿನ
ಧೂಳಿಸೆಲದಿಂದತ್ತಲತ್ತಲು ನಿನ್ನ ಬಾಳಿನ
ಬೆಳಕು ಬಿಂಬವನೆಳೆಯುತಿರುವನು, ಮರವು ಮುತ್ತಿದೆ
ಕಾಳರಾತ್ರಿಯ ಕರಿಯ ತೆರೆಯನು ಸುತ್ತುಹೆಣೆದಿದೆ.
ಕರುಳು-ಬಳ್ಳಿಯೆ ! ಹಡೆದು ಹಿಂಗುತ ಉಣಿಸಿ ಬೆಳಸುತ
ನಿನ್ನ ತಿವಿಯುವ ತಾಪಶತಗಳ ನುಂಗಿ ನೋಯದೆ
ತಾಳಿ ಬಾಳುವ ತಿಳಿವಿನಮೃತವನೂಡಿದವಳೇ !
ಇದ್ದೆ ನೀನೆಂಬುವುದನೂ ಸಹ ನೆನೆಯದಿರುವೆನು !
ಜನ್ಮಯಾತ್ರೆಯ ದಾರಿಮರದಲಿ ತೂಗು-ತೊಟ್ಟಿಲ-
ದಂತೆ ನಿನ್ನಯ ಮಡಿಲೊಳೆನ್ನನು ತೂರಿ ತೂಗುವ
ಉಸಿರಿನೊಳ ಉಸಿರಾಗಿ ನಿಂತಿಹ ಹಿರಿಯ ತಾಯಿದು
ಕಲ್ಪಕಲ್ಪದ ಹಿಂದೆಯುಗಲಿರೆ ಎಂತು ನೆನೆಯುವೆನು ?

# ಪ್ರೇಮವೇ !

(ಗಜಲ್ ಧಾಟಿಯಲ್ಲಿ)

ಪ್ರೇಮವೇ ನಿನ್ನಾಳವೇನೂ ಕಾಣಲಾರೇ ಕಾಣೆನೆ.
ಒಮ್ಮೆ ಆನಂದಾತ್ಮೆ ನೀನು, ಒಮ್ಮೆ ಭೀಕರಕಾಮನೆ.

ಚಂದ್ರತಾರೇ ಎಂದಿನಿಂದೋ ಸೂಸುವಂತೆ ಚೆಂದವ
ನಿಂದೆ ನೀನೂ ಎಂಬ ವೇಳೆ ಆದೆ ಕಲ್ಪಾಂತಾನನೆ.

ಜೀವನೀಲಾಕಾಶದಲ್ಲಿ ನಿಂತ ಜ್ಯೋತಿರ್ಬಿಂದುವೆ!
ಯಾವ ಗಾಳಿ ತಾಕಿ ಬಿದ್ದೆ ಪಂಕದಲ್ಲಿ ಪಾವನೆ.

ಬಾಲರಾದಾ ಕಾಲದಂದು ಮುಕ್ತಜೀವಾನಂದವೆ!
ಬಾಲ್ಯ ಹೋಗೆ ಯಾವ ಹಾವೋ ಸುತ್ತಿ ಮಾಯಾಬಂಧನೆ.

ಕಾಮಧೂಮಾಂಧಾರ್ತ ಜೀವ ತಾವೆ ತೋರಿ ಸಾರಿವೆ
ಪ್ರೇಮಜ್ವಾಲೆ ನಿತ್ಯ ನೀನೂ ಇರ್ಪೆ ಎಂಬಾ ಮಾತನೆ.

# ಪ್ರೇಮಗಂಗಾ !

ಬಾರೆ ಬಾ ಪ್ರೇಮಗಂಗಾ!

ಬರಡಾದ ಜೀವವಿದು
ಕರೆಯುತಿದೆ ಆಲ್ಪರಿದು
ಇನ್ನು ನಾ ಕರೆಯದೊಲು
ನೀನೇ ನೀ ಹರಿದು ಬಾ.

ನೀನು ಪ್ರೀತಿಯ ಪೂರ-
ವೆಂದು ನಾನರಿತಿರುವೆ.
ಹೊರಗೆ ತೋರದೆ ಇಹುದೆ?
ಹೊರಸೂಸಿ ಹರಿದು ಬಾ.

ಅಡಗಿ ಹರಿಯುವ ಹೊಳೆಯ
ಬೆಡಗ ನಾ ಕಾಂಬೆನೇ?
ನಾಚಿಕೆಯ ಗಿರಿ ತೊರೆದು
ಈಚೆ ಬಾ ಬಯಲಲ್ಲಿ.

ನಿನ್ನ ಪ್ರೇಮದ ಜಲದ
ಸ್ವಾದವನು ನೀನರಿಯೆ,
ನಾನದನು ಕಂಡಿರುವೆ
ನನಗಾಗಿ ಬೇಗ ಬಾ.

ಹಗಲು ಇರುಳೂ ಬಿಡದೆ
ನಗುವ ಪ್ರೀತಿಯ ತೆರೆಯ
ಮೇಲಿದ್ದು ಜೀವಿಸುವೆ
ನೀನೇ ಹೃದಯಾಮೃತವು.

# ನನ್ನ ಕಮಲಿನಿ

ನನ್ನ ಕಮಲಿನಿ
ಎನಿತು ಮಾನಿನಿ!
ಎಳೆಯ ನಗೆಯ ಮುಕುರದಲ್ಲಿ
ಎದೆಯಲುಗುವ ಭಾವ ತೋರ್ಪ
ನನ್ನ ಕಮಲಿನಿ
ಎನಿತು ಮಾನಿನಿ!

ಜೀವಪದ್ಮ ತಾನೆ ತನ್ನ
ಓವ ತರಣಿಗರಳುತಿರಲು
ದೇವ ಮಾತನಾಡಲೆಂದು
ಜಿಹ್ವೆಯೇಕೆ ಸಲ್ಲಿಸಿದನೊ
ಎಂಬ ಕಮಲಿನಿ
ಎನಿತು ಮಾನಿನಿ!

ಮೊದಲು ಅವಳ ಕ್ಷಿತಿಜದಲ್ಲಿ
ಉದಯವಾಗೆ ಎನ್ನ ಮೂರ್ತಿ
'ಮದುವೆಯಾಗು ಇನಿಯ' ಎಂದು
ಎನದೆ ಇನಿಸೆ ನಗುತಲಿರುವ
ನನ್ನ ಕಮಲಿನಿ
ಎನಿತು ಮಾನಿನಿ!

ಮುಂದೆ ನಾನು ಕಾಲರಥದಿ
ಬಂದಿಯಂತೆ ಸಿಕ್ಕು ಸಾಗೆ
ವಂದಿಸಿದರು ಕೆಳಗೆ ಬಾಗಿ
ಒಂದು ಮಾತನಾಡದಿರುವ
ನನ್ನ ಕಮಲಿನಿ
ಎನಿತು ಮಾನಿನಿ !

ಅಂಥ ಸ್ನೇಹ, ಅಂಥ ನಗೆಯು
ಅಂತರಂಗ ತಿಳಿಯದಂತೆ
ಎಂತೊ ನಾನು ಪಂಥ ಹಿಡಿಯೆ
ಮುನಿಸೆ ಇರದೆ ಇನಿಸೆ ನಗುವ
ನನ್ನ ಕಮಲಿನಿ
ಎನಿತು ಮಾನಿನಿ !

ಕಡೆಗೆ ನಮ್ಮ ಕೂರ್ಮೆ ಹಗಲ
ಕಡೆಯು ಬರಲು, ಇರುಳು ಹೆಣ್ಣು
ನನ್ನ ಕೊರಳ ಬಿಗಿಯ ಬಯಸೆ
ಚೆನ್ನ ಹಂಸವವಳ ವರಿಸೆ
ಸಣ್ಣ ಕೊರಗು ಮಾತು ಇರದೆ
ಜೊನ್ನದಂತೆ ನಗುತಲಿರುವ
ನನ್ನ ಕಮಲಿನಿ
ಎನಿತು ಮಾನಿನಿ !

ಸಂದುಹೋಗೆ ಕಾಲಚಕ್ರ
ಇಂದು ಅವಳ ದೃಷ್ಟಿಪಥದಿ
ನಿಂದು ನಾನು ಮರುಕ ತೋರೆ
ಅಂದವಾದ ಮೃದುಲ ನಗೆಯು
ಬಂಧ ಹರಿದು ಬರಲು ನಾನು
'ಇದುವೆ ಇರಲಿ ಎಳೆಯ ನಗೆಯೆ
ಮದುವೆಯೇಕೆ ಹೃದಯ ಬೆರೆಯೆ ?'
ಎನಲು ಇನಿಸೆ ನಗುತಲಿರುವ
ನನ್ನ ಕಮಲಿನಿ
ಎನಿತು ಮಾನಿನಿ !

## ಬೆಳೆಯುವ ಗರ್ಭಕ್ಕೆ—

ಬೆಳೆಯುತಿಹ ಬಸಿರೆ, ನೀ
ಬೆಳಕಿನಲಿ ಬರಲೆಂದು ಹಾರಯ್ಸುವೆ.
ಇಳೆಬೆಳಕಿಗಿಂತಲೂ
ಒಳ ಇರುಳು ಹಿರಿದೆಂದು ಕಾಣದೇನೊ!

ಮೈಯು ಹಿಸುಕಾಡದಿರೆ
ನೋಯುತಿರಬಹುದಲ್ಲಿ ಒರಗಿ ಒರಗಿ.
ಅಯ್ಯೋ ಹಿಸುಕಾಡಿಯೂ
ಸುಯ್ಯುತಿಹ ಬಾಯೇಸೊ ಇಲ್ಲಿ ಇಲ್ಲಿ!

ಸುತ್ತಿಹುದು ಮಾಸ-ಬಲೆ
ಎತ್ತಲೂ ತೆರವಿಲ್ಲ ಎಂಬೆಯೇನೊ.
ಇತ್ತ ಈ ತೆರವಿನಲಿ
ಸುತ್ತು ಗೋಡೆಯು ಕಟ್ಟಿ ಜೀವರಿಹರು!

ತಿನಲೊಂದೆ ತರದುಣಿಸು
ಮನಬಂದ ಭೋಗಕೆಡೆಯಿಲ್ಲ ಎಸುವೆ.
ತಿನಲೆಲ್ಲ ಇದ್ದರೂ
ಮನಸತ್ತ ಮಾನವರು ಹಸಿದಿರುವರು!

ಬಿಚ್ಚು ಬೆಳಕಿನ ಕನಸು
ನಿಚ್ಚವೂ ಮೂಡುತಿರಬಹುದು ಅಲ್ಲಿ.
ಹುಚ್ಚು ಅದು ಎನುವಂತೆ
ಮುಚ್ಚುತಿದೆ ಮುಚ್ಚಂಜೆ ತೆರೆಯು ಇಲ್ಲಿ!

ತುಂಬು-ನಗೆ, ತಾಳ್ಮೆ ಬಗೆ
ಅಂಬುಜದ ಮೊಗವಲ್ಲಿ ತೋರಬಹುದು.
ನಂಬದಿರು, ಜಂಬ ಬಿಗು
ಹುಂಬ ಬಾಳೆಲ್ಲ ಹಿಚುಕಲಿಹುದಿಲ್ಲಿ!

# ಹುಟ್ಟು-ಹಬ್ಬ

ನಿನ್ನ ಹುಟ್ಟಿದು ಹಬ್ಬವೇ ಮಗುವೆ?
ಎರಡು ಬೇಸಗೆಯುರುಳಿ ಹೋದರೂ
ಅರಳದಿದೆ ನಿನ್ನ ಬಾಡಿದ ಮೊಗವು
ಬೇನೆಯುರಿಬಿಸಿಲಲ್ಲಿ ಬೆಂದ ಮೈ
ಕಾಣುತಿದೆ ಬೆಂಗಾಡನಪ್ಪಿದೊಲು.
ಹುಣ್ಣು ತವರಾದ ತಲೆ ತೆರವಾಗಿ
ನುಣ್ಣುಗುರುಳಾಟವನು ಆಡದಿದೆ.
ಗೋಣು ನಿಲ್ಲದು, ನಡುವು ತೂಗುವುದು
ಮೇಣ ಮುದ್ದೆಯು ತೇರಿನಂತೊಲೆವೆ.
ಎಲುವಿನಲಿ ಬಲವಿಲ್ಲ, ನರಗಳಲಿ
ಚಿಲಿಯೆಂದು ಹೊಸ ರಕುತ ಚಿಮ್ಮದಿದೆ.
ತಿಂಗಳನು ಕಂಗಳಲಿ ತೋರಿಲ್ಲ
ಅಂಗದಲಿ ಹಿರಿಮಿಂಚು ಸೂಸಿಲ್ಲ
ಇಲ್ಲ ಇಲ್ಲೆಂಬ ನುಡಿ ಕಿವಿ ಕೊರೆದು
ಎಲ್ಲ ಸಂತಸಸೆಲೆಯು ಬತ್ತಿಸಿದೆ.
ಎಂದಿಗದು ಮಣ್ಣಿನಲಿ ಮೈಮುಳುಗಿ
ಅಂದುಗೆಯ ಸಪ್ಪಳದಿ ನಡೆತಂದು
ಹಸುವಮ್ಮ ಎಂಬ ನಿನ್ನಯ ತೊದಲ
ಹಸಿದ ಕಿವಿಕಣ್ಣು ಪಡೆಯುವವೆಂದೊ!
ಏಸು ಜನ್ಮದ ಕರ್ಮ ಕಲೆಕಲೆತು
ಲೇಸು ಕನಸಿನ ಕತ್ತನಿರಿಯುವುದೊ!
ಕಸುವಳಿದ ನೆಲದಿ ಅಳಿ-ಬೀಜ ನಿಲೆ
ಸಸಿಯೆದ್ದು ಬೆಳೆಯುದಂತಾದೆಯೋ?

* * * *

# ಹುಟ್ಟು-ಹಬ್ಬ

ನಿನ್ನ ಹುಟ್ಟಿದು ಹಬ್ಬ ನಿಜ ಮಗುವೆ!
ಎರಡು ಸ್ನೇಹದ ನೆರವಿಯೊಡಲಿಂದ
ಅರಿದಾದ ಮೈದಾಳಿ ಹೊರಬಂದು
ಬೆಸೆದ ಬಾಳಿನ ನಿಚ್ಚಗುರುಹಾಗಿ
ಉಸಿರಾಡುತಿರುವಿರುವೆ ಎನ್ನೊಲವೆ.
ನಲುಮೆ-ಬಳ್ಳಿಯ ಗೊನೆಯ ಹಿರಿಹೂವೆ!
ನಲುಮೆಯೇ ಚೆಲುವೆಂದು ಸಾರುವೆ.
ಬೇನೆಬಲಿಯಾಗಿ ಬರಿ-ಬೆಂಡಾದ
ನಿನ್ನ ಮೈಯಲಿಯೊಲವು-ಮಳೆ ಸೂಸಿ
ನಿನ್ನನಾರೈಸುತಲಿ ಹಿರಿತಣಿವ-
ನುಂಡಿಹೆನು ಬೇರೇನು ಬೇಡೆಂಬೆ.
ಲೇಸು ತಾ ಬಂದೀತು ಮುಂದೊಮ್ಮೆ
ಲೇಸೀಗಳೊಲವು-ಹೊಳೆಯೀ ಸಾಟ.
ಹಸವಳಿದ ಜೋಲಾದ ಮೊಗವನ್ನು
ಹಸಿಹುಣ್ಣು ಬಸಿಯುತಿಹ ಮೈಯನೂ
ಒಸೆದು ನಾ ನೋಡುತಿರೆ ಅದು ಹೇಗೊ
ಹೊಸ ಕಣ್ಣು ಮೂಡುವುದು ಮಿರುಗುವುದು
ದೇವಸೃಷ್ಟಿಗೆ ಮಿಗಿಲು ಚೆಲುವಿಕೆಯು
ಕಾಂಬುವುದು ಮೈಮನವ ಮುತ್ತುವುದು.
ನೀನೆ ನೀನೆನ್ನ ದೇವತೆಯೆಂದು
ಇನ್ನಾವುದೂ ಎನಗೆ ಬೇಡೆಂದು
ನೂರಾಗಿ ಮುತ್ತಿಟ್ಟು ಬಿಗಿದಪ್ಪಿ
ತೂರುವೆನು ನಲಿಯುವೆನು ಬೆರೆಯುವೆನು!

# ಬೀರಿಯ ಪ್ರೀತಿಯ ಕರೆ

( Philida's love call ಎಂಬುದರ ಅನುವಾದ )

ಬೀರಿ : ಏಳು ನನ ಗಿರಿಮಲ್ಲ, ಏಳೇಳು ನನ ನಲ್ಲ
ಹೊರಗ ಬೆಳಗ್ಯಾಸ ದಿನಮಣಿ.

ಗಿರಿಮಲ್ಲ : ಯಾರವರು ಕರೆದಾರ, ಏಳೆಂದು ಗಿರಿಮಲ್ಲ.
ಕೇಳುವೆನು ಯಾರ ಇನಿದನಿ ?

ಬೀರಿ : ನಾ ನಿನ್ನ ಕರಿತೇನು ನಿನ್ನ ನಚ್ಚಿನ ಬೀರಿ
ಏಳಿನ್ನು ವ್ಯಾಗ ನನ ಗೆಣೆಯ
ಏಳು ಕಾಯೋಣ ಕುರಿಮರಿ.

ಗಿರಿಮಲ್ಲ : ಹೌದೇನ ನನ ಬೀರಿ, ಅಚ್ಚುಮೆಚ್ಚಿನ ಬೀರಿ
ಬಂದೇನ ಬಂದೆ ನಿನ ಗೆಣೆಯ
ಬಂದೆ ಕಾಯಾಕ ಕುರಿಮರಿ.

ಬೀರಿ : ನೋಡಿಲ್ಲಿ ಗಿರಿಮಲ್ಲ ನೀರಲ ಕಳತಾವ
ತಂದೇನು ತಿನ್ನು ನಿನಗಾಗಿ.

ಗಿರಿಮಲ್ಲ : ನೋಡಿಲ್ಲಿ ನನ ಚೆನ್ನಿ ಬಿದಿರು ಕೊಳಲಾಗ್ಯಾವ
ನುಡಿಯಿಸು ನಿನ್ನ ಸುಕಕಾಗಿ.

**ಬೀರಿ :** ಇಲ್ಲಿರುವ ನೂಲೆಳಿಗೆ ರೇಶಿಮಿ ನಾಚ್ಯಾವ
ನೆಯ್ದೇನೊ ನಿನಗ ಚೆನ್ನಿಗ
ನೆಯ್ದೇನು ಹಾಲ-ಬಿಳಿ-ವಲ್ಲಿ.

**ಗಿರಿಮಲ್ಲ :** ಇಲ್ಲಿರುವ ಕುರಿ-ಉಣ್ಣಿ ಮೈತುಂಬ ಚಾಚ್ಯಾವ
ಹೊಸದೇನ ನಿನ್ನ ಬೆನ್ನೀಗೆ
ಹೊಸದೇನ ಚಳಿಗೆ ಕಂಬಳಿ.

**ಬೀರಿ :** ಹರಿವೇನು ಹೂವೆಲ್ಲ ಗಿರಿಮಲ್ಲ ಇರಿಸೇನು
ಪಾವಡಕ ಒಂದು ಬಾಸೀಗ.

**ಗಿರಿಮಲ್ಲ :** ನನ್ನ ಮೋಹದ ಬೀರಿ, ಉಡಿತುಂಬ ಸುರಿಸೇನ
ಪೇರಲದ ಹಣ್ಣು ಏಸೀಗ,

**ಬೀರಿ :** ನನ ನಲ್ಲ ಮಲ್ಲಗ ದಡಿಯುಳ್ಳ ದೋತರ
ಮಾನಮ್ಮಿಗೊಂದು ತರುವೇನ
ಮಾರಾಯ್ನ ಮೈಗೆ ಮುಡುಮಾಗಿ.

**ಗಿರಿಮಲ್ಲ :** ನನ ನಾರಿ ಬೀರೀಗೆ ಸೀರೀಯ ತರತರ
ಮಾನಮ್ಮಿಗೆಂದು ತರುವೇನ
ಮಾಟನ್ನ ನಡುವಿಗುಡುಮಾಗ.

**ಬೀರಿ :** ದಿನ್ನೀಯ ತುದಿಮ್ಯಾಲ ನನ ಮಲ್ಲಿ ಕುಳಿತಾಗ
ಕೊಳಲ ದನಿಯೊಂದು ಮಾಡೂತ—

**ಗಿರಿಮಲ್ಲ :** ರಾಟೀಯ ಬಳಿಹೋಗಿ ನನ ಚೆನ್ನಿ ಕುಳಿತಾಗ
ಸವಿಹಾಡನೊಂದು ಹಾಡೂತ—

**ಬೀರಿ :** ಸುಳ್ಳಲ್ಲ ಅನಸೀತ ನನ ನಲ್ಲ ಮಿಾರ್‍ಯಾಸ
ಸ್ವಾದಕ, ನಲ್ಲ, ಸ್ವಾದಕ
ಸ್ವಾಮಿ ನಮ್ಮಪ್ಪ ಬೀರಯ್ನ.

ಗಿರಿಮಲ್ಲ : ಜಾಣಿ ನನಗನಸೀತ ನನ ರಾಣಿ ವಿಹಾರ್‍ಯಾಳ
ಚೆಲುವೀಗೆ, ಸಲ್ಲೆ, ಚೆಲುವೀಗೆ-
ನೂರಾರು ರಂಭಿ ನಾರೇರ್‍ನ.

ಬೀರಿ : ನನ ಸಲ್ಲ ಗಿರಿಮುಲ್ಲ ದಮುಯಂತಿ ಸಯಂವರಕ
ಹೋದವನಲ್ಲ ಹೋದರ—

ಗಿರಿಮಲ್ಲ : ನನ ಚೆನ್ನಿ ಅಂಬಿಗರ ವಸುಗಂಧಿ ಸನಿಯಕ
ಇದ್ದವಳಲ್ಲ ಇದ್ದರ—

ಬೀರಿ : ನಳ ದೊರಿಯು ಕಳುಹೀಸಿ ದಮುಯಂತಿ ಗುಣವಂತಿ
ವರಸ್ಯಾಳ, ದೇವಿ, ವರಸ್ಯಾಳ
ಮುಲ್ಲನ, ನನ್ನ ಸಲ್ಲನ.

ಗಿರಿಮಲ್ಲ : ಮುರತವಳ ಶಂತನು ಬಂದಾನು ನಿನ ಹಂತಿ.
ಎರದಾನ, ಧಾರಿ, ಎರದಾನ
ತನಮುನಧನವನೆಲ್ಲಾನ.

ಬೀರಿ : ಅವ್ವಯ್ಯ! ಗಿರಿಮುಲ್ಲ ಬಂದಳು ನನ ತಾಯಿ
ಮಾತಾಯಿ! ಎಲ್ಲಿಗೋಡಲೆ?

ಗಿರಿಮಲ್ಲ : ಆಲದ ಮುರದ್ಹಿಂದ ಮುರೆಯಾಗ, ನಿನ ತಾಯಿ
ಕೋಲೂರಿ ಮುಂದೆ ಹೋಗಲಿ.

ಬೀರಿ : ಮುನದನ್ನಿ ಬಂದಿಲ್ಲ ಎಂದು ನುಡಿ ಅವಳೀಗೆ
ನೆನಪಿರಲಿ, ಸಲ್ಲ, ನೆನಪಿರಲಿ
ನಾಳ್ಯೊಂದು ದಿವಸ ಇರುವುದ.

ಗಿರಿಮಲ್ಲ : ಇತಿಮಿತಿ ನಿನಗ್ಯಾಕ ಬೇರೊಂದು ತಿಳಿಬ್ಯಾಡ
ಬರುವೇನು, ಚೆನ್ನಿ, ಬರುವೇನು-
ಪರಸಿವನ ಒಲುಮಿ ಕಾಯುವುದ.

—ರಂಗವಿನಾಯಕ.

# ಚೇತನದ ಚೆಲುವು !

ಚೇತರಿಸಿಕೊಂಡೇಳೆ ಚೇತನದ ಚೆಲುವೆ !
ನೂತನದ ನಾಡಿನಲಿ ನೂತನೆಯು ಆಗಿ.

ಬಲ್ಲವಳು ಇದ್ದು ನೀ ಮರವು-ಹಾಸಿಗೆಯಲ್ಲಿ
ಸುಳ್ಳುನಿದ್ದೆಯ ಗೈವುದೆನಿತೆನಿತು ಒಲವೆ !

ಪ್ರೈಮನದ ನೆರಳಲ್ಲಿ ಮುದುಡಿ ಪವಡಿಸಿದಾಕೆ
ವ್ಯೋಮಭೂಮಿಯ ತುಂಬಿ ನಿಲುವಾಕೆಯಾಗೆ !

ಸರ್ವಹೃದಯದ ಒಲುಮೆಯುಡಿಗೆಯೊಂದನು ನೆಯ್ದು
ಸರ್ವಕಾಲದಿ ಧರಿಸಿ ಸಹಜದಲಿ ರಮಿಸೆ !

ಭೇದ-ಬಂಧಗಳೆಂಬ ಮುಳ್ಳುಹಂದರದಲ್ಲಿ
ಸೀದುಹೋಗುವುದೇಕೆ ಸರ್ವಗತ ಬಲವೆ !

ಚಣ-ನೋವು, ಕೊನೆ-ಸಾವುಗಳ ಕೊಳೆಯು ಕೊಳದೊಳಗೆ
ಮುಣುಗಿ ದಣಿಯದ ಹಾಗೆ ತಣಿವು ಪಡೆ ತಾಯೆ !

ನಕ್ಷತ್ರದುಪ್ಪರಿಗೆ ತುತ್ತತುದಿಯಲಿ ನಿಂತು
ಅಕ್ಷಯದ ಆನಂದವುಣಿವರಸಿಯಾಗೆ !

# ಜೀವಗಾಥೆ

ಸಾಗಿದೆನು ನಾ ಜನ್ಮಜನ್ಮದಲಿ
ಸುಖವೆಂಬ ಸೊಗಸುಗಾತಿಯು ನೆರಳು ತುಳಿಯುತಲಿ.

ಬಾಗಿದೆನು ನೆರಳಲ್ಲ ನಿಜವೆಂದು
ಹುಡಿಗೋಟೆಯುಲಿ ಹೊಕ್ಕು ಮುದ್ದಿಕ್ಕಿ ಹೊರಬಂದು
ಸಾಗಿದೆನು ನಾ ಜನ್ಮಜನ್ಮದಲಿ
ಸುಖವೆಂಬ ಸೊಗಸುಗಾತಿಯು ನೆರಳು ತುಳಿಯುತಲಿ.

ಇಂದ್ರಿಯದ ಹಯ ಹೂಡಿ ಚೆಂದಾಗಿ
ಸೊಗದ ಚಣಗಳ ಬೇಟೆಯಾಡಲಿಕೆ ಮುಂದಾಗಿ
ಎಂದಿನಿಂದಲೊ ನಡೆದೆ ನಿಲ್ಲದಲೆ
ಮೃಗತೃಷೆಯು ತವಮಯವಾಗಿ ಮರಳಿದೆನು ಪಡೆಯದಲೆ.

ದೇಹಗಳನೆನಿತೊ ನಾ ಸೇರಿದೆನು
ಕೊಡಲೆಂದು ಆ ಪದೆಪು ಪಡೆದು ಬಂದ ಪುಣ್ಯವನು
ದಾಹವನು ತುಳಿದೆನ್ನ ಸವೆಯಿಸುತ
ತರಗೆಲೆಯು ತೆರದಿ ಅವು ಹಾರಿದವು ಹಿರಿನಗುತ.

ಬಹುಯುಗದಿ ಬಳಲಿ ನಿಂತಿಹ ನನಗೆ
ಸುಖವೊಂದು ಕನಸಿನಾ ಕನಸಾಗಿ ತೋರುವಗೆ
ಬಹುದು ಎಲ್ಲಿಂದಲೋ ನೆರೆಚಿಮ್ಮಿ
ಹೊಸ ಕೂಗು 'ಇರುವೆ ನಾ ನಿನ್ನ ಬಳಿ ನೋಡು ನೆಮ್ಮಿ!'

# ಇಂದು ನಾ ನಿಂತಿರುವೆ

ಇಂದು ನಾ ನಿಂತಿರುವೆ-
ನಾನಂದಘನಸಾಗರದ ತೀರದಲ್ಲಿ
ಮುಂದೊಂದು ಮಂಜು-ತೆರೆ-
ಯಿಹುದು ತೆರೆಯುವರಾರೊ ಅದು ಏನೊ ಎಂದೊ!

ತೀಡುತಿದೆ ತಂಗಾಳಿ
ಆ ನೀರ ತಂಪನಿಯ ತಲೆ-ಮಣಿಯ ತಳೆದು
ನೋಡುತಿಹೆ ತೆರೆಯೆಡೆಗೆ
ತೆರೆಯುದಿರೆ ಹನಿಸಾಲು ಸವಿಸೆಳಕು ಸಾರಿದು.

ಬಿರುಗಾಳಿ ನೂಕಿ ಬರೆ
ಸರಿಯುವುದು ತೆರೆಯೊಂದು ಹಿರಿಹಿಗ್ಗಿ ಕುಣಿವೆ.
ಕರಿಮೋಡ ಕರೆದದುವೆ
ತೆರೆಯ ಹಿರಿದಾಗಿಸಲು ಕೆಳಕೆಳಗೆ ಸರಿವೆ.

# ಜೀವಶುಕಾ !

ನಾಮಸ್ಮರಣದ ಸಾಮಗಾನದಲಿ
ನಿಂದಿರು ಜೀವಶುಕಾ !
ದೇಹದ ಸುಂದರ ಪಂಜರದಲ್ಲಿಯೆ
ನಿಂದಿರು ಜೀವಶುಕಾ ! ಪ.

ಒಡೆಯನ ಪಡೆಯುವ ಹಾತೊರೆಯೇತಕೆ ?
ಪಡೆಯುವುದಿಲ್ಲೇ ಒಡಲಲಿ ಇರಲಿಕೆ.

ಬಂಧದ ಅಂದವ ಬೇಡಿದುದೇಕೆ ?
ಇಂದದನೇತಕೆ ಬಿಸುಡುವ ಬಯಕೆ ?

ಮರವಿನ ಮರೆಯಲಿ ನೆನವು-ದೀಪಿಕೆ
ಉರಿವುದ ಕಾದಿರು ಜನ್ಮಜನ್ಮಕೆ.

ಪಡೆಯುವ ನೆನವಿನ ಸೊಡರನು ಪಡೆದೆ
ಕಡೆವರೆಗೂ ಇದೆ ತಡೆದರು ಗೆಲಿದೆ.

ನೆನವೇ ಒಡೆಯನು ನಿಂದಿರು ನೆನೆಯುತ
ನೋವಿನ ಕೆಲದಲಿ ನಲವಿನ ಬಲದಲಿ.

# ಕಾಂತಾರದೊಳ ಕಾಸಾರ !

ಜೀವನದಿ ಅಲೆದಲೆದು ಒಳಲಿ ಶಾಂತಿಯನರಸಿ
ಸಾವುದೊರೆ ಕಾಲಾಳು ಘೋರಮೃಗದಾರಾವ-
ದೆಂತ ಕಾಂತಾರದೊಳ ಕಾಸಾರ ಕಂಡೆ !

ತಿಳಿನೀರಿನಲಿ ನಾನು ಮುಳುಗಿ ಜಗ ಮರೆಯುವೆನು-
ತಿಳಿದಿದನು ತಿಳಿಗೊಳವ ನಾ ಸೇರದೊಲು ಗೈವ
ಎಂತ ಕಾಂತಾರದೊಳ ಕಾಸಾರ ಕಂಡೆ !

ದಡದಿ ನಾ ನಿಂತಿರುವೆ, ಮಡಿಕೆ ತೆರೆ ನೋಡುತಿಹೆ
ಕಡಗಿ ಕೊಳದೊಳು ಧುಮುಕಗೊಡಲಾರದಂತಿರುವ
ಎಂತ ಕಾಂತಾರದೊಳ ಕಾಸಾರ ಕಂಡೆ !

ಪಡೆವೆ ಶಾಂತಿಯ ನೀರನೆಂಬ ಜೀವವ ತಡೆವ
ತೊಡಕುತೊಡರಿನ ಕಾಡು, ಹುಳು ಮೇವ ಕೊಳೆಹುಲ್ಲಿ-
ನೆಂತ ಕಾಂತಾರದೊಳ ಕಾಸಾರ ಕಂಡೆ !

## ಎಲೆ ಜೀವ !

ದೋಷಶತದಗ್ಧದೇಹದೊಳಿದ್ದು
ದೋಷದೂರನ ವಿಮಲಗುಣಪೂರ್ಣ
ದೇವರಾಯನ ಬರವು ಬೇಡಲಿಕೆ
ಯಾವ ಧೈರ್ಯವೊ ನಿನಗೆ ಎಲೆ ಜೀವ !

ನಿನ್ನ ಕುಂದನು ನೀನೆ ಕಳೆಯದಲೆ
ಬರಿಯ 'ಬಾ ದೊರೆ ಕೊಳೆಯ ತೊಳೆ'ಯೆಂದು
ಕರೆಯೆ ಮನೆಯಾಳುಗಳ ಕರೆವಂತೆ..........ಯಾವ

ನಿನ್ನ ಮೈ-ಮನ ಹುಳುಕು ಹೊಳೆಯಾಗಿ
ಹರಿಯುತಿರೆ ತಿಳಿಹೊಳಪ ತಳೆಯದಲೆ
'ಮುನ್ನೀರೆ ಕೂಡು ಬಾ' ಎಂದೊರಲೆ........ಯಾವ

ಕೊರತೆ ಕರಗಿಸುತ ನೀನಿರುವಾಗ
ದೊರೆತ ನೆರವೇ ದೇವನಾಗಿರಲು
ಬರವಿಗಾಗಿಯೆ ಬರಿದೆ ಹಂಬಲಿಸೆ..........ಯಾವ

ಕುಂದು ಕಳೆ! ನಂಬು ನೆನೆ! ಎಂಬ ನುಡಿ
ತಂದೆ ನಿನ್ನೊಳು ನಿಂದು ಆಡುತಿರೆ
ಇಂದು ಬಾ! ಇಂದೆ ಬಾ!' ಎಂದೊರೆಯೆ......ಯಾವ

ತಂದೆ ಬಹನೆಲ್ಲಿಂದ ಎಲ್ಲಿಗೇ?
ನಿಂದಿಹನು ಎಲ್ಲದರ ಎಲ್ಲೊಳಗು
ಎಂದು ತಿಳಿಯದೆ ತೊಳಲಿ ಬಾ ಎನಲು........ಯಾವ

ನಿನ್ನೊಳದ ಬಾವಿಯಲಿ ನೀ ಮುದುಡಿ
ಬಿದ್ದಿರಲು ಮೇಲೆ ಬರೆ ಹವಣಿಸದೆ
ಮುನ್ನ ಬಾ! ಎಲ್ಲದಕು ಬಾ' ಎನಲು........ಯಾವ

ನೀನು ಏಳಲು ತೊಡಗಿ ಕೈಚಾಚೆ
ಕಾಣದೆಳೆ ಯಾವುದೋ ಕೈಕೊಡಲು
ಆದ ಹಿಡಿದು ನಡೆಯುದಲೆ ಕರೆಯುಲಿಕೆ........ಯಾವ

ನೀ ನಿನ್ನ ಕೊಳೆಕೊಳ್ಳವನು ದಾಟಿ
ನಿಂದು ನೋಡಲು ದೇವದೇವನೇ
ಕಾಣುತಿರೆ ಇಂದು ಬರಿ ಕೂಗಲಿಕೆ..........ಯಾವ

ನೀನೊಮ್ಮೆ ಬಾ ಎಂದು ಕರೆಯುತಿರೆ
ತಂದೆ ಸಾವಿರಸಲವು ಬಾ ಎನುವ-
ನೆಂಬುದರಿಯುದೆ ಬಾಯು ತೆರೆಯುಲಿಕೆ........ಯಾವ

# ದಿನದಿನದ ಬಳಲಿಕೆ

ದಿನದಿನದ ಬಳಲಿಕೆಯನಾರಿಗೆಂದುಸುರುವೆನು
ಚಣಚಣದ ಬಿಸಿಯುಸಿರನಾವ ಗಾಳಿಯು ತೊಡೆಯು ಮೇಲಿರಿಸಿ
ತಣಿಯುವೆನು ?

ಕೇಳಲೊಲ್ಲದು ಮಾತ ಮೊದಲು ಕಂಡಿಹ ಶಾಂತಿ
ಬಾಲನಂದದಿ ಕೊಸರಿ ಕಣ್ಣಾಲಿಯೊಳು ತಿವಿದು
ತಾಳ ತಪ್ಪಿಸಿ ಕಾಲಹೆಜ್ಜೆಗಳ ಹಾಕುತಲಿ
ಕೇಳಿಯಾಡುತ ನಡೆದಿತಾಲಯುದಿ ಬಹುದೂರದಿ.

ತನುವು ಕೇಳುವುದೆ? ಕಿವಿ ಕೇಳುವವೆ ಬವಣಿಯನು ?
ಮನವು ತಾ ಕೈಮಿಾರಿ ಕಲ್ಲಾಗಿ ನಿಂತಿಹುದು.
ಮನದ ಕಲ್ಲಿನ ಒಳಗಿನಾಳದೊಳಗಿನ ತಳದಿ
ಘನತಾಪವಹ್ನಿಯುದು ತಾನೆ ತಾನೇಳುತಿಹುದು.

ಒಂದು ಮುಳ್ಳಿನ ನೋವನೊಂದು ಜನ ನಂಬುವುದು
ಒಂದು ಸಾವಿನ ಕತೆಯು ಕೇಳಿ ಎದೆ ತೆರೆಯುವುದು
ಹಿಂದುಮುಂದೆಯು ಇರದ ನೋವು ನೆರೆಯಾಗಿ ಬರೆ
ಮಂದಿ ಮಾಡುವರೇನು ? ನಾನೇನ ಮಾಡಲಾಪೆ ?

ತರತರದ ತಾಪದಲಿ ಕೊರಕೊರಗಿ ಕುದಿಕುದಿದು
ಮರುಗುವುದೆ ಜೀವನದಿ ನೋಯುವರ ಹಿರಿದಾರಿ
ಮರುಗಿನಲಿ ದೊರೆಯು ನಿಜಕರುಣೆಯುದು ಮಿರುಗುತಿರೆ
ಅರಿತು ಕೈಯಲಿ ಕೊಂಬ ದಾರಿಗರು ಎಲ್ಲಿ ಎಲ್ಲಿ ?

# ದಿನದಿನದ ಬಳಲಿಕೆ

ದಿನದಿನದ ಬಳಲಿಕೆಯನಾರಿಗೆಂದುಸುರುವೆನು
ಚಣಚಣದ ಬಿಸಿಯುಸಿರನಾವ ಗಾಳಿಯ ತೊಡೆಯ ಮೇಲಿರಿಸಿ
ತಣಿಯುವೆನು ?

ಕೇಳಲೊಲ್ಲದು ಮಾತ ಮೊದಲು ಕಂಡಿಹ ಶಾಂತಿ
ಬಾಲನಂದದಿ ಕೊಸರಿ ಕಣ್ಣಾಲಿಯೊಳು ತಿವಿದು
ತಾಳ ತಪ್ಪಿಸಿ ಕಾಲಹೆಜ್ಜೆಗಳ ಹಾಕುತಲಿ
ಕೇಳಿಯಾಡುತ ನಡೆದಿತಾಲಯದಿ ಬಹುದೂರದಿ.

ತನುವು ಕೇಳುವುದೆ? ಕಿವಿ ಕೇಳುವವೆ ಬವಣಿಯನು ?
ಮನವು ತಾ ಕೈಮೀರಿ ಕಲ್ಲಾಗಿ ನಿಂತಿಹುದು.
ಮನದ ಕಲ್ಲಿನ ಒಳಗಿನಾಳದೊಳಗಿನ ತಳದಿ
ಘನತಾಪವಹ್ನಿಯದು ತಾನೆ ತಾನೇಳುತಿಹುದು.

ಒಂದು ಮುಳ್ಳಿನ ನೋವನೊಂದು ಜನ ನಂಬುವುದು
ಒಂದು ಸಾವಿನ ಕತೆಯ ಕೇಳಿ ಎದೆ ತೆರೆಯುವುದು
ಹಿಂದುಮುಂದೆಯು ಇರದ ನೋವು ನೆರೆಯಾಗಿ ಬರೆ
ಮಂದಿ ಮಾಡುವರೇನು ? ನಾನೇನ ಮಾಡಲಾಪೆ ?

ತರತರದ ತಾಪದಲಿ ಕೊರಕೊರಗಿ ಕುದಿಕುದಿದು
ಮರುಗುವುದೆ ಜೀವನದಿ ನೋಯುವರ ಹಿರಿದಾರಿ
ಮರುಗಿನಲಿ ದೊರೆಯ ನಿಜಕರುಣೆಯದು ಮಿರುಗುತಿರೆ
ಅರಿತು ಕೈಯಲಿ ಕೊಂಬ ದಾರಿಗರು ಎಲ್ಲಿ ಎಲ್ಲಿ ?

# ಮೂಲ-ಮಾನಸ-ಸರ

ಮೂಲಮಾನಸಸರದ ತಿಳಿನೀರ ಸೆಲೆ ಬರೆತುಹೋಗಿಹುದು
ಹಾಲಗಂಗೆಯು ಹರಿವ ಹಾದಿಯನೆ ಮರೆತಲ್ಲಿ ನಿಂತಿಹಳು

ಹಿಮದ್ವೈವತದ ಬಿಳಿಯ ಬೆಟ್ಟಗಳು ಕಪ್ಪುಕರಿಕಾಗಿವೆ
ತಮದೆ ಕೈಸೆರೆಯಾಗಿ ತಮ್ಮೊಳಗೆ ಕಟಕಟನೆ ನಡುಗುತಿವೆ

ಸತ್ವ ಸೂರ್ಯನ ಬರವು ಕಾಯುತಲೆ ಗಾಳಿ ಗಾರಾಗಿಹುದು
ಎತ್ತಲೂ ಕವಿದಿರುವ ಮೋಡಗಳ ಮೊತ್ತವೇ ತೋರುವುದು

ಅಳಲೆಂದರೂ ಜೀವ-ನಯನದಲಿ ಕಣ್ಣೀರ ಕಾಳಿಲ್ಲ
ನಿಲಲೆಂದರೂ ಸಾವು-ಬದುಕುಗಳ ನಡುಬಯಲೆ ಬೇರಿಲ್ಲ

ಹರಿವೆ ಹೊಸಪರಿಯ ತೋರುವೆನೆಂಬ ಕಾಲದೀ ಕಾಳ್ಪುರವು
ಹರಿಯುತಿದೆ ಕಣ್ಣಾಳಿದು ಪಾತಾಳ ತಳದೊಳಗೆ ಕ್ಷಣಕ್ಷಣವು !

## ಆನಂದವೇ !

ಹಿಂದೆ ಬಾ! ಮುಂದೆ ಬಾ! ಆನಂದವೇ!
ಇಂದಿನೀ ಜೀವನದ ಮಂದಾರವೇ!

ಬಳಲುತಿದೆ ಜೀವವಿದು
ಬಾಳುವೆಯ ಕುಣಿಕೆಯಲಿ,
ಹರಿಯಿಸುತ ನಿನ್ನ ಹೊಳೆ, ಮೀಯಿಸಲು ಬಾ!

ಬಂಧನದ ಬಾಳಿನಲಿ
ಬಿಡುಗಡೆಯ ಚೆಂದವನು
ತಂದು ತಿಳಿಸಗೆ ತೂರ್‍ಪ ಶಿಶುತನವೆ ಬಾ!

ಒಳಹೊರಗು ಚೆಲುಗಡಲ
ಕಂಡು ಕಾಣದೆ ಇರುವೆ,
ನೀನೊಂದು ಹಿಗ್ಗು-ಹಡಗಾಗಿ ಕರೆ ಬಾ!

ಕ್ಷಣದ ನಾಣ್ಯದ ಸಂತೆ
ಮನದ ಕಿರಿಹಿರಿ ಚಿಂತೆ
ನಿನ್ನಿರವ ಮರೆಸುತಿವೆ ನೀನಾಗಿ ಬಾ!

ಹಿರಿದಾದ ರೂಹಿನಲಿ
ಬರುವಿ ನೀನದು ಎಂದೊ
ಇರಲಾರೆ ಬರುವನಿತು ಬೇಗದಲಿ ಬಾ!

# ಬಾಳು ಜೀವವೇ !

ಗಾಳಿಯುಂಡು ತೇಗಿ ತೂಗಿ
ಬಾಳುತಿರುವ ಬಳ್ಳಿಯಾಗಿ
ಏಳು ಏಳು ಜನ್ಮಗಳಲಿ
ನಾಳೆ ಎಂಬ ಹಾಳು ತೊರೆದು ಬಾಳು ಜೀವವೇ.

ಇಂದಿಗೇಕೆ ಇನಿತು ಎಲೆಯು
ವೃಂದವಿಲ್ಲಿ ಜನಿಸಿ ನಿಂದು
ಮುಂದೆ ಮುರುಟಿ ಪೋಪುದೇಕೆ
ಎಂದು ಕೇಳಲೆಂಬ ಕನಸು ಬೇಡ ಜೀವವೇ.

ಮಳೆಹನಿಗಳ ಮುತ್ತು ಸೇಸೆ
ತಳೆಯುವಾಗ ತನಿತು ತಳೆದು
ಬಿಳಿಯ ಬಿಸಿಲ ಮುಳ್ಳುಮೊನೆಯು
ಇಳಿಯೆ ತಿವಿಯಲಾಗ ತಾಳಿ ಬಾಳು ಜೀವವೇ.

ಬೀಸಿ ಬೀಸಿ ಮೈಯ ದಣಿಸಿ
ಸೋಸಿ ಗಾಳಿ ಧೂಳಿ ತರಲು
ಗಾಸಿಗೊಂಡು ಏತಕೆಂದು
ಏಸು ಬಾರಿ ಎಂದು ಕೇಳದಿಹುದು ಜೀವವೇ.

ಮರವು ಎಂಬ ಮಂಚದಲ್ಲಿ
ಒರಗಿ ನೀಳ್ದ ನಿದ್ದೆಯಲ್ಲಿ
ಇರವು ಇದುವೆ ಬೇರೆಯಿಲ್ಲ
ಮರಣ ಕರೆವ ವರೆಗೆ ಎಂದು ಬಾಳು ಜೀವವೇ.

# ಹಿರಿಯ ಚೆಂದವು

ಕುಂದದೊಂದು ಮಂದಹಾಸ-
ದಿಂದ ವ್ಯೈಮನಗಳ ಬೆಳಗಿ
ಎಂದೆಂದಿಗು ಮುಂದೆ ಮುಂದೆ
ಮುಂದರಿವುದೆ ಬಾಳ ಹಿರಿಯ ಚೆಂದವು.

ಬಿದ್ದ ಬೀಳು ಮುರಿದ ಮುಳ್ಳು
ಎದ್ದು ತೊಡೆದು ಮುಂದೆ ನಡೆದು
ಸೋತ ಸೋಲನೆಲ್ಲ ಮರೆದು
ಗೆದ್ದ ಗೆಲವು-ನಲಿವು ನೆನೆದು.

ಹಳನೆನಹಿನ ಕೊಳೆತ ಕೊಳದಿ
ಮುಳುಗಿ ನಿಲದೆ ಮುನ್ನೋಟದ
ಜುಳುಜುಳಿಸುವ ಝರಿಯ ಜಲದಿ
ಜಳಕ ಮಾಡಿ ತಳತಳಿಸುತ.

ಕೋಟಿ ಯುಗದ ಕರ್ಮ ರಚಿತ
ಕೋಟೆಯೊಡೆದು ಸೆರೆಯ ಹರಿದು
ದಾಟಿ ಯೊಡರು ಹಿಗ್ಗಿ ಹಗುರಿ-
ನಾಟವಾಡಬಲ್ಲೆವೆನುತ.

ನಾಶದ ಬಿರುಗಾಳಿ ಬೀಗಿ
ಬೀಸಿ ತಿರೆಯ ತೂರಿದರೂ
ಆಶೆಗುದುರೆ ಯೇರಿ ಮೀರಿ
ಸಾಸ-ನಿಚ್ಚ ಹಾಸವಾಗಿ.

ಪ್ರಳಯದಿರುಳು ಸುತ್ತಿಮುತ್ತಿ
ಕಳೆದರೇನು ಕಣ್ಣ ಹೊಳವು
ತಿಳಿವು ಸೂರ್ಯ, ಸಲಿವು ಚಂದ್ರ
ಬೆಳಗೆ ಬೆಳಗು ಆಗಿ ಸಾಗಿ.

# ನೆ ರ ವು

**ನೆನೆಯುವ.** ಸತ್ಯವಾದ ಸರ್ವವ್ಯಾಪಿಯಾದ ದೇವಶಕ್ತಿಯು ಅರಿವ ಕವಿಯ ಮನಸ್ಸನ್ನು ಮುತ್ತಿದಾಗ ಈ ಕವನ ಹುಟ್ಟಿದೆ. ಆ ಶಕ್ತಿಯ ನಿತ್ಯ ಸ್ಮರಣವು ತೀರ ಸಹಜ ಮತ್ತು ಅಗತ್ಯವೆಂದು ಈ ಕವನದ ಮುಖ್ಯ ಭಾವ ಇರುತ್ತದೆ.

ತೀವಿದ ತೊರೆ=ತುಂಬಿದ ಹೊಳೆ: ವ್ಯೋಮ=ಆಕಾಶ; ಜೆನುಗುಸಿರು=(ಜೆನುಗು + ಉಸಿರು) ಸೂಕ್ಷ್ಮ ಪ್ರಾಣ (ಚೈತನ್ಯ); ಹಿರಿಕುರುಹು=ದೊಡ್ಡ ಗುರುತು; ಕಡಲು=ಸಮುದ್ರ; ನಲಿವಿನ ರನ್ನ=ಸಂತೋಷದ ರತ್ನ.

**ವಂದನವು.** ನಮಗೆ ಕಾಣದೆ ಇರುವ ವಿಶ್ವದ ಒಡೆಯನು ಹೇಗೇ ಇರಲಿ, ನಮಗೆ ಕಾಣುವ ನಿತ್ಯಸತ್ಯವೊಂದಿದೆ, ಅದರ ನಿಯಮಜಾಲವಿದೆ. ಅದರ ಸೌಂದರ್ಯವನ್ನೂ ವೈಭವವನ್ನೂ ಸಣ್ಣಪುಟ್ಟ ಅನುಭವಗಳಲ್ಲಿಯೂ ಕಂಡು ಅದಕ್ಕೆ ಇಲ್ಲಿ ಹೃತ್ಪೂರ್ವಕವಾದ ವಂದನೆಯನ್ನು ಅರ್ಪಿಸಲಾಗಿದೆ.

ಪ್ರತಿಹೃದಯಸ್ಪಂದನ=ಪ್ರತಿಯೊಂದು ಎದೆಯ ಹಾರಿಕೆ; ಕಾಂಬದಿಟದ ಸೊಮ್ಮುಸಿರಿ=ಕಾಣುವ ಸತ್ಯದ ವೈಭವ-ಸೌಂದರ್ಯ; ನೇಹ=ಸ್ನೇಹ, ಪ್ರೀತಿ; ಅಳಿಯದಳುಕದೊಲವ=(ಅಳಿಯದ ಅಳುಕದ ಒಲವ) ಅವಿನಾಶಿಯಾದ ಅಚಲವಾದ ಪ್ರೇಮವನ್ನು; ಇಳೆ=ಭೂಮಿ; ಕೊಳೆ=ಹೊಲಸು; ಅಣು=ತೀರ ಸಣ್ಣ ಭಾಗ; ಅಳಿವು=ನಾಶ; ಮೊಳೆ=ಹುಟ್ಟು, ಅಂಕುರಿಸು; ಎಲರು=ಗಾಳಿ; ಮುಗುಳು=ಮೊಗ್ಗೆ, ಕುಡಿ; ನಿಯತಿ=ನಿಶ್ಚಿತಸ್ವರೂಪದ ವಿಧಿ.

**ಅನಂತಶಕ್ತಿಗೆ.** ಈಗಿದ್ದ ಶಕ್ತಿ ಮಾನವ ಜಾತಿಗೆ ಸಾಲದೆಂದೂ ಹೆಚ್ಚಿನ ಶಕ್ತಿಯನ್ನು ನೀಡಿ ಪ್ರಗತಿಯ ದಾರಿಯಲ್ಲಿ ಮಾನವನನ್ನು ಮುಂದೊಯ್ಯ ಬೇಕೆಂದೂ ಅನಂತಶಕ್ತಿಯನ್ನು ಕುರಿತು ಇಲ್ಲಿ ಪ್ರಾರ್ಥನೆಯಿದೆ.

ಅಸುಗೊಳಿಸು=ಸಿದ್ಧಮಾಡು; ಪಂಟಿನ ನುಡಿ=ಹೆಮ್ಮೆಯ, ಡೌಲಿನ ಮಾತು; ಹುಲು ಆಸೆ=ಕೀಳು ಬಯಕೆ, ಸಣ್ಣಪುಟ್ಟ ಅಪೇಕ್ಷೆ; ತೊರೆ=ಬಿಡು, ಅಲಕ್ಷಿಸು.

**ಹೊಸಯುಗ.** ಹಸಗೆಡು=ಸೌಂದರ್ಯ-ಸ್ವಾರಸ್ಯ ಕಳೆದುಹೋಗು; ಹೊಂಬೆಳಕು=ಬಂಗಾರದ ಬೆಳಕು; ಚಿರತರುಣತೆ=ನಿತ್ಯವಾದ ತಾರುಣ್ಯ; ಅರಳು=ಹೂವು; ಸೊಲ್ಲು=ಮಾತು; ಜನಜನನಿ=ಲೋಕದ ತಾಯಿ, ದೇವರು.

**ಹೊಸಜೀವವನು ತುಂಬು.** ಒಂದು ದೊಡ್ಡ ಗುರಿಯನ್ನು ಇಟ್ಟು ಕೊಂಡು ತನ್ನ ಜೀವನ ದೊಡ್ಡದಾಗಬೇಕೆಂದು ಕವಿ ಹೊರಟಾಗ, ತಪ್ಪಿಸ ಲಾರದ ತಾಪತ್ರಯಗಳಿಂದ ಅವನ ಗತಿ ತಡೆಯುತ್ತದೆ, ಬಾಳುವೆ ಹಳಸುತ್ತದೆ. ಅಂಥ ಒಂದು ಸಮಯದಲ್ಲಿ 'ಹೊಸಜೀವವನು ತುಂಬು' ಎಂದು, ಎಂಥ ಕಸವನ್ನೂ ರಸಮಾಡಬಲ್ಲ ದೇವನಲ್ಲಿ ಕವಿ ಮೊರೆಯಿಡುತ್ತಾನೆ.

ಗೈವ=ಮಾಡುವ; ಹೊಸೆ=ತಿಕ್ಕು, ಸರಿದಾಡು; ಅರಿದಾದ=ತಿಳಿಯದ, ಅದ್ಭುತ; ತಾರೆ=ನಕ್ಷತ್ರ; ಬಳಿಸಾರಿ=ಹತ್ತಿರ ಹೋಗಿ; ಒಲವು ವಿಾಸಲು= ಪ್ರೇಮಕ್ಕೆ ಅರ್ಪಿತ; ಮುನ್ನವೇ=ಮೊದಲೇ; ಮರಳಿ=ಮತ್ತೆ; ಮೈದಾಳು= ಮೈಯನ್ನು ತಾಳು, ಪ್ರಕಟವಾಗು.

**ನಿಂತೆ ನಿಂತೆ.** ಅದೆಷ್ಟೋ ಕಾಲದ ವರೆಗೆ ದೇವನ ಅನುಗ್ರಹವನ್ನು ಬಯಸಿ ಭಕ್ತನು ಅವನ ಮನೆಯ ಬಾಗಿಲ ಮುಂದೆ ನಿಂತಂತೆ ಆಗುತ್ತದೆ, ತಾಳ್ಮೆ ಮುಗಿದುಹೋಗುತ್ತದೆ, ಆಗ 'ನೀನೇ ಬೇಕು' ಎಂದು ಅವನು ಕೂಗುತ್ತಾನೆ, ದೇವನ ಕರುಣೆಯ ಬಗ್ಗೆ ಎಳ್ಳಷ್ಟು ಸಂಶಯವಿಲ್ಲದಿದ್ದರೂ ಮತ್ತೆ ಮತ್ತೆ ಕೂಗುತ್ತಾನೆ. ಇಂಥ ಒಂದು ಚಿತ್ತವೃತ್ತಿಯನ್ನು ಈ ಕವನದಲ್ಲಿ ಕಾಣಬಹುದು.

ಸಂತವಿಸು=ಸಮಾಧಾನಗೊಳಿಸು; ನಾಕ=ಸ್ವರ್ಗ; ಇರವು ಕುರುಹು=ಇರುವುದರ ಗುರುತು; ಅರಿವು=ಜ್ಞಾನ, ತಿಳಿವಳಿಕೆ; ಸನಿಯ=ಸಮೀಪ; ಇನಿಯ=ಪ್ರಿಯ, ದೇವ.

**ಜೀವದ ಹೂವು.** ಎಲೆಹಸಿರು=ಎಲೆಗಳ ಹಸಿರು; ಬನ್ನ=ದುಃಖ, ಯಾತನೆ; ಹೊರೆ=ಭಾರ; ಹಸವಳಿ=ಅಂದಗೆಡು; ಜಸ=ಯಶಸ್ಸು, ಕೀರ್ತಿ; ಮುಸುಳು=ಮಲಿನ, ಕಂದಿದ; ಕರಿಬಂಡುಣಿ=ಕಪ್ಪಾದ ಭ್ರಮರ, ಗುಂಗೀ ಹುಳ (ಬಂಡು + ಉಣಿ=ಹೂವಿನ ಜೇನನ್ನು ಉಣ್ಣುವುದು); ಚೆನ್ನ=ಸುಂದರ, ದೇವ; ಮಾಳ್ಕೆ=ರಚನೆ, ಸೃಷ್ಟಿ; ಸರುಗಂಪು=ಸುವಾಸನೆ; ನೆರೆ=ನೆಟ್ಟಗೆ, ಪೂರ್ಣವಾಗಿ.

**ನೀನೇ ಉಳಿಸು ತಂದೆ.** ಅನೇಕ ಶತಮಾನಗಳಿಂದ ಕಟ್ಟಿದ ಸಂಸ್ಕೃತಿಯ ಗುಡಿಯು ಬೀಳಲಾಗಿದೆಯಲ್ಲ ಎಂಬ ತೀವ್ರದುಃಖವು ಈ ಕವನವನ್ನು ಪ್ರೇರಿಸಿದೆ. ಅದನ್ನು 'ನೀನೇ ಉಳಿಸು' ಎಂದು ದೇವನಲ್ಲಿ ಬೇಡಿಕೆಯಿದೆ.

ಹೊನ್ನಹಿರಿಕಳಸ=ಬಂಗಾರದ ದೊಡ್ಡ ಕಳಸ; ಭಾನು=ಸೂರ್ಯ; ಮುಸುಡಿ=ಮುಖ; ಅಣಕಿಪ=ಅಣಕಿಸುವ; ನಿಚ್ಚಳ=ಸ್ಪಷ್ಟ, ಸ್ವಚ್ಛ; ಅಲೆಯಲೆ=ತೆರೆತೆರೆ.

**ಜಯಂತಿ.** ಎಲ್ಲ ಹುಟ್ಟಿಗೆ ಕಾರಣಳಾದ ಆದಿಮಾಯೆಯನ್ನು ಇಲ್ಲಿ ಜಯಂತಿ ಎಂದು ಕರೆದಿದೆ; ಒಂದು ಹುಟ್ಟಿದ ದಿವಸ ಅವಳನ್ನು ಕುರಿತು ಆತ್ಮೀಯ ಜೀವನದ ಬಗ್ಗೆ ಇಲ್ಲಿ ಕವಿಯು ಹೇಳಿತವಿದೆ, ಪ್ರಾರ್ಥನೆಯಿದೆ.

ತೊಳಗು=ಹೊಳೆ; ಆಗಸ=ಆಕಾಶ; ಜನಯಿತ್ರಿ=ಹುಟ್ಟಿಸಿದವಳು; ಆತ್ಮಶಿಶು=ಆತ್ಮವೆಂಬ ಕೂಸು.

**ಅರಿವಿನಾಳದಲಿದ್ದು.** ದೇವನ ಕರುಣೆಯ ಸೂಕ್ಷ್ಮರೀತಿಯನ್ನು ಇಲ್ಲಿ ಬಣ್ಣಿಸಿದೆ. ಮನುಷ್ಯನ ಕರೆಗೂ ದೇವನ ಬರವಿಗೂ ಹೊಂದಿಕೆ ತಪ್ಪಿದಂತೆ ಆಗುವುದೇಕೆ ಎಂಬ ಯೋಚನೆಯನ್ನೂ ಇಲ್ಲಿ ವಿವೇಚಿಸಿದೆ.

ಅರಿವಿನಸಾಳ=ತಿಳಿವಳಿಕೆ, ಇಲ್ಲವೆ ಪ್ರಜ್ಞೆಯ ಒಳಒಳಗಿನ ಸ್ಥಿತಿ; ಹೊರ ಗಣಂಗಳ=ಹೊರಗಿನ ಅಂಗಳ, ಹೊರಭಾಗ; ಹರಿ=ಹರಿದಾಡು, ಬಾ; ಕರಣ= ಇಂದ್ರಿಯ; ಮಳಲು=ಉಸುಕು; ಇದಿ=ವಿಧಿ, ದುಷ್ಟ; ಕದನ=ಯುದ್ಧ; ಹಗೆ=ವೈರಿ; ಎನಿತು=ಎಷ್ಟು.

**ಮೀನಗಾರನಿಗೆ.** ಯಾವಾಗಲೂ ಸೌಂದರ್ಯಸಾಗರದಲ್ಲಿ ಈಸಾಡ ಬೇಕೆಂದು ಕವಿಜೀವದ ಮೀನ ಹಾತೊರೆಯುತ್ತದೆ, ಆದರೆ ಮೃತ್ಯುವೆಂಬ ಮೀನಗಾರ ತನ್ನ ಬಲೆಯಲ್ಲಿ ಎತ್ತಿಬಿಡುವನೆಂಬ ಭಯವು ಅದನ್ನು ಗಾಬರಿ ಗೊಳಿಸುತ್ತದೆ. ಆಗ ಆ ಮೀನಗಾರನನ್ನು ಉದ್ದೇಶಿಸಿ ಮಾಡಿದ ಮನವಿಯು ಈ ಕವನದಲ್ಲಿದೆ.

ಮಿಂದು=ಸ್ನಾನಮಾಡಿ; (ಮಿ-ಧಾತು). ಆಮಿಷ=ಮೋಹ; ಮೋಹಕ ವಸ್ತು; ಕಾಮಿಯೊಲು=ಕಾಮಿಯಂತೆ; ಅನಿಮಿಷ=ಮೀನ, ದೇವತೆ; ಅಮರ; ಸಿರಿಗಣ್ಣು=ಸೌಂದರ್ಯದ ಕಣ್ಣು.

**ಕವಿಗಳ ಮಾತು.** ಆದೇಶ=ಅಪ್ಪಣೆ, ಪ್ರೇರಣೆ; ಸವಿಯೊಸಗೆ=ಸವಿ ಯಾದ ಸುದ್ದಿ; ಬೇಹಿನಾಳು=ಸುದ್ದಿಬೀರುವ ದೂತ, ಚಾರ; ಹಸವೆತ್ತ=ಚೆಲು ವಾದ; ಕಲೆಯ ಗಾರುಡಿ=ಎಲ್ಲ ಕಲೆಯಲ್ಲಿ ಇರುವ ಆಕರ್ಷಕತೆ, ಚಮತ್ಕಾರ.

**ಕಬ್ಬಹಣ್ಣು.** ದಿವ್ಯಸ್ಫೂರ್ತಿಯಿಲ್ಲದೆ ಕಾವ್ಯಫಲವು ದೊರೆಯಲಾರದು ಎಂಬುದು ಇದರ ಭಾವ; ತೋಟದ ರೂಪಕದಲ್ಲಿ ಇದನ್ನು ಹೇಳಿದೆ.

ಕಬ್ಬದೋಟ=ಕಾವ್ಯದ ತೋಟ; ಎರೆಯ=ಒಡೆಯ, ಯಜಮಾನ; ಮಡಿ=ಶುದ್ಧ, ತೋಟದ ಮಡಿ; ಪವಡಿಸು=ಮಲಗು; ಜಿನುಗುದೇರು= ಸೂಕ್ಷ್ಮವಾದ ತೇರು; ಮಾಮೈಮ=ಮಹಾಮಹಿಮ, ದೇವ.

**ಕಾವ್ಯದೇವಿ.** ಜೀವನವು ಬೆಳೆದು ಹಿರಿದಾದಂತೆ ಕಾವ್ಯವು ಕಳೆಯೇರು ತ್ತದೆ. ಜೀವನದ ಮುನ್ನಡೆಯಿಲ್ಲದೆ ಕಾವ್ಯಕ್ಕೆ ಮುನ್ನಡೆಯಿಲ್ಲ. ಅಂತೇ

'ಒಬ್ಬಳೇ ಬರಬೇಡ ಕಾವ್ಯದೇವಿ, ಬೆಳಕಿನೊಡನೆ ಬಾ' ಎಂದು ಇಲ್ಲಿ ಬೇಡಲಾಗಿದೆ.

ಬಗೆನಾಡವರು=ಮನಸ್ಸಿನ ದೇಶದವರು (ವಿಚಾರ-ಭಾವನೆ ಮುಂತಾದುವು) ಸಾಸ=ಸಾಹಸ; ಅರಿಕೆನುಡಿ=(ಬರವು) ತಿಳಿಸುವ ಮಾತು; ಸಲ್ತಾಯಿ=ಪ್ರೀತಿಯ ತಾಯಿ; ಬಿತ್ತರ=ವಿಸ್ತಾರ.

**ಮೂರು ಹೂವು.** ಕೈವಲ್ಯಕಾಂತಿ=ಮೋಕ್ಷದ ಕಳೆ; ಸೌರಭ್ಯ=ಸುವಾಸನೆ; ಹಸೆ=ಹಾಸಿಗೆ; ಕೆಲ=ಮಗ್ಗುಲು, ಬದಿ; ಪಾರಣೆ=ತೃಪ್ತಿ, ಸಂತೋಷ; ಸಾವುಮೈಯುಳಿದ=ನಿತ್ಯ, ಅಮರ.

**ಸಂಪಗೆಯ.** ಸಂಪಗೆಯ ಹೂವಿನ ತುದಿಗೆ ನಸುಕೆಂಪು ಮೂಡಿದ್ದು ಕಂಡಾಗ ಹೊಳೆದ ಕಲ್ಪನೆಯೊಂದು ದಾಂಪತ್ಯರೂಪಕವಾಗಿ ಹೀಗೆ ಮೂಡಿದೆ.

ಅಲರು=ಹೂವು; ತನಿವ=ಹೆಚ್ಚುವ, ತುಂಬಿಕೊಳ್ಳುತ್ತಿರುವ; ಎದೆಯಾಣ್ಮ=ಹೃದಯೇಶ್ವರ, ಪತಿ; ಕಸಲು=ಸಿಟ್ಟಾಗು; ಕೆನ್ನೆ=ಗಲ್ಲ; ಮಡಿಲು=ಉಡಿ; ಒಡನಾಡಿ=ಒಡನೆ ಆಡುವ ಗೆಳೆಯ, ಗೆಳತಿ; ಮಗುಳೆ=ಮತ್ತೆ; ಮುಕುಲಿತ=ಮೊಗ್ಗೆಯಾದ, ಮುದುಡಿಕೊಂಡ; ನೈದಿಲೆ=ಕಮಲ.

**ಲೀಲೆ.** ಒಮ್ಮೆ ಸಂಪಗೆ ಹೂಗಳನ್ನು ಕೈಯಲ್ಲಿ ಹಿಡಿದು ಸುಖಪಟ್ಟಿರಲು, ಹೂಗಳಿಲ್ಲದಾಗ ಕೂಡ ಕೈಬೆರಳುಗಳಿಗೆ ಸಂಪಗೆಯ ವಾಸ ಬಂದಿತು. ಆಗ ಈ ಕವಿತೆಯ ಕಲ್ಪನೆ ಹುಟ್ಟಿತು. ತನ್ನ ದೇಹವೇ ದೇವನ ಅದ್ಭುತಲೀಲೆಯೆಂದು ಕಾಣುವಂತಾಗಲಿ ಎಂಬುದು ಇಲ್ಲಿ ಕವಿಯ ಕೋರಿಕೆ. ಮೂಗನ್ನು ಸಂಪಗೆಯ ತೆನೆಗೆ ಹೋಲಿಸುವುದು ಹಳೆಯ ಕಾವ್ಯರೂಢಿಯಿದೆ. ಅದನ್ನು ಇಲ್ಲಿ ಈ ಕವಿತೆಯ ಮಟ್ಟಿಗೆ ಅಲ್ಲಗಳೆದಿದೆ.

**ಮಂದಾರ ಹೂವಾ.** ಇದು ಮುಖ್ಯವಾಗಿ ಒಂದು ಕಲ್ಪನಾಲಹರಿ. ಆದರೂ ಇದಕ್ಕೆ ಸೂಚ್ಯತೆ ಇಲ್ಲದೆ ಇಲ್ಲ. ಅದನ್ನು ಗುರುತಿಸಲು ಕೊನೆಯ ಸಾಲನ್ನು ನೋಡಬೇಕು. 'ಲೋಕದ ಹೂವು (ಈ ಲೋಕದ ಚೆಲುವು)

ಬೇಕಾದಷ್ಟು ಇರುವಾಗ ಸ್ವರ್ಗದ ಹೂವು (ಪರಲೋಕದ ಚೆಲುವು) ಗಳನ್ನು ಯಾರು ಕೇಳುತ್ತಾರೆ?' ಎಂದು ಆ ಸೂಚ್ಯತೆಯನ್ನು ತಿಳಿಯುವುದು ಒಂದು ಬಗೆ. ಬೇರೆಯಾಗಿಯೂ ತಿಳಿಯಬಹುದು.

ಪೂವಾಡಗಿತ್ತೇರು=ಹೂ ಮಾರುವ ಹೆಂಗಸರು. ಅಂದಾದ ಅಂದೂಗಿ=ಚೆಂದಾದ ಅಂದುಗೆ, ಕಾಲಗೆಜ್ಜೆ; ವಾಸವರಾಯ=ಇಂದ್ರ.

**ಬಿದಿಗೆ ಚಂದಿರ.** ಕಾರಿರುಳು=ಕಪ್ಪು ರಾತ್ರಿ; ಎಳಶಶಿ=ಬಾಲಚಂದ್ರ, ಬಿದಿಗೆಯ ಚಂದಿರ; ತಣಿಗಂಡು=ತಣಿಯುವ ವರೆಗೆ ಕಂಡು; ಚುಕ್ಕಿ=ಶುಕ್ರ; ಬಿಲ್ಲು ಬೆರಗಾದ ಬಗೆ=ಬಹಳ ಬೆರಗಾದ ಮನಸ್ಸು; ಚೆಲ್ಲ=ಸಂತೋಷ, ಸುಖ; ಬಾಂದಳ=ಮುಗಿಲಿನ ಎಡೆ (ಬಾನ್+ತಳ); ಸಿರ್ಮಿತಿ=ಸೃಷ್ಟಿ; ನಗೆಮುಗುಳು=ಮುಗುಳು ನಗೆ.

**ಬಂದಿಯಾ ಬೆಳದಿಂಗಳೆ.** ಸುಯ್ಗರೆ = ನಿಟ್ಟುಸಿರು ಬಿಡು; ಅಂದದೊಡತಿ=ಸೌಂದರ್ಯದ ಅಧಿದೇವಿ; ಮರೆಮಾಜು=ಬಚ್ಚಿಡು; ನೆರವಿ=ಸಮೂರು; ತೋರಗತ್ತಲೆ=ಕಗ್ಗತ್ತಲೆ, ಕೆಂಗದಿರ=ಸೂರ್ಯ; ಮಿಣುಕುಹುಳ=ಹೊನ್ನೆಹುಳ.

**ಮರೆಯಾಗದಿರು ಚಂದ್ರಾ.** ಹರಹು = ವಿಸ್ತಾರ, ಅಗಲ; ಸರುವಸೀಸೋನೆ=ಎಲ್ಲ ಸವಿಯ ಧಾರೆ; ಜೊನ್ನ=ಬೆಳದಿಂಗಳು; ಮರುಬುವಿ=ಮರುಭೂಮಿ; ಮೋಡಿಮನೆ=ಮೋಹಿಸುವ ಮನೆ; ನಿಲಿಪ ಅಳವು=ನಿಲ್ಲಿಸುವ ಶಕ್ತಿ.

**ಚಂದ್ರಹಾಗೆಯೆ.** ಮಳೆಗಾಲದ ರಾತ್ರಿಯೊಂದರಲ್ಲಿ ಹೊಳೆಹೊಳೆಯುವ ಚಂದ್ರನನ್ನು ನೋಡಿದಾಗ ಈ ಕವಿತೆಯ ಉದಯವಾಯಿತು.

ಪರುಷ=ಒರೆಗಲ್ಲು, ಪರೀಕ್ಷಿಸುವ ಒರೆ; ಅಂತು=ಹೊಂದಿ; ಕರೆ=ಕಪ್ಪು, ಕಲೆ; ದಿನದ ತಂದೆ=ಸೂರ್ಯ; ಬಿನದ=ವಿನೋದ, ಸಂತೋಷ; ಕುಸುಗು=ಮುದುಡು; ಕಾರು=ಮಳೆಗಾಲ; ಮಿಗಿಯೆ=ಮಿರಾರಲು.

**ಕಿರಣರಾಣಿ.** ನಿಚ್ಚ=ನಿತ್ಯ, ಸತತ; ತಿಂಗಳ=ಚಂದ್ರ; ನೀರೆ=ಸುಂದರಿ, ಸಲ್ಮೆ=ಪ್ರೀತಿ.

**ಕಾಮನ ಹುಣ್ಣಿಮೆ.** ಅಣಕಾಟ=ವಿಡಂಬನೆ ( Irony ); ಪಿಳ್ಳೈ=ಸಣ್ಣ ಹುಡುಗ; ಕಿಳ್ಳಿಕೇತಾಟ=ಕಿಡಿಗೇಡಿತನ; ತುರುತುರುಗಿ=ತುಂಬಿತುಂಬಿ, ವ್ಯಾಪಿಸಿ; ತೀಟ=ಬೀಸುವಿಕೆ; ಸುಳಿದಾಟ; ಸುಂಟುರೆ=ಸುಂಟರಗಾಳಿ.

**ಎಳಹಕ್ಕಿಯೆ.** ಸೆಳೆಗೊಂಬು=ಎಳೆಯ ಟೊಂಗೆ;ಉಯ್ಯಾಲೆ=ಜೋಕಾಲಿ; ಮಾನಸಿಕೆ=ಮನುಷ್ಯತ್ವ; ಕಡೆವರ=ಕಡೆಯ ವರೆಗೆ.

**ಹೊಸಕಾಲದ ನವಿಲು.** ಮಳೆಗಾಲದಲ್ಲಿ ಕುಣಿದಾಡುವ ನವಿಲನ್ನು ಇಲ್ಲಿ ಬಣ್ಣಿಸಿದೆ. ಹೊಸಕಾಲದ ಹೊಸಹುರುಪಿನ ಸಂಕೇತವನ್ನೂ ಇದರಲ್ಲಿ ಇಟ್ಟುಕೊಂಡಿದೆ.

ದ್ವಿಜ=ಹಕ್ಕಿ, ಪಂಡಿತ; ಮಾಸದ=ಕುಂದದ, ಹೆಚ್ಚುವ; ತಿರೆ=ಭೂಮಿ; ಉಲಿ=ಹಾಡು; ಪಸೆ=ಹಸುರಿನ ಹಾಸಿಗೆ; ರಕ್ಕಸ=ರಾಕ್ಷಸ; ಬವರ=ಯುದ್ಧ; ಮಾಣದ=ಬಿಡದ, ಒಂದೇ ಸಮನೆ ನಡೆದ; ನೇಸರ=ಸೂರ್ಯ; ಪೊಡೆ=ಹೊಟ್ಟೆ;

**ರತ್ನಗಂಬಳಿ.** ಉಂಬಳಿ=ಕಾಣಿಕೆ,ವತ್ತಿ; ಪಚ್ಚೆ=ಹಸಿರು; ಮಲೆ=ಗುಡ್ಡ; ಪರುಷ=ಸ್ಪರ್ಶ, ಸೋಂಕು; ರೋಮಹರುಷ=ರೋಮಾಂಚ;ಓರಣ=ಸಾಲು. ತಳತಳಿಪುವು=ಥಳಥಳ ಹೊಳೆಯುವವು; ನೀರ್ವನಿ=ನೀರ ಹನಿ; ಸಂತಸ= ಸಂತೋಷ; ಬರೆತ=ಒಣಗಿದ.

**ತಣ್ಣನ ಗಾಳಿ.** ಇಬ್ಬರು ಗೆಳೆಯರು ಕೂಡಿ ಒಂದೆ ಭಾವದಲ್ಲಿ ತಲ್ಲೀನ ರಾಗಿ ಹಾಡಿದ ಹಾಡಿದು. ಬೆಳದಿಂಗಳ ರಾತ್ರಿಯಲ್ಲಿ ಮೆಲ್ಲನೆ ಬೀಸುವ ತಂಗಾಳಿಯ ಸೌಖ್ಯವನ್ನು ಇಲ್ಲಿ ವರ್ಣಿಸಿದೆ.

ಎಲ್ಲೆಡೆ=ಎಲ್ಲ ಕಡೆಗೆ; ಬೆಳ್ಜಸ=ಬಿಳಿಯ ಕೀರ್ತಿ; ಅಲುಗದೆ=ಅಗಳಾಡದೆ, ಚಲಿಸದೆ; ಹೊಮ್ಮು=ಹೊರಬರು, ಉಕ್ಕು; ನೆರೆ=ಕೂಡು, ಪೂರ್ಣಗೊಳ್ಳು.

**ಬೀಸು ತಾಯಿ.** ಒಂದು ರಾತ್ರಿ ಭೋರೆಂದು ಬಿರುಗಾಳಿ ಬೀಸುತ್ತಿದ್ದಾಗ, ಒಬ್ಬ ತಾಯಿಯು ಎಡೆವಿಡದೆ ಬೀಸುಕಲ್ಲಿನಲ್ಲಿ ಬೀಸುತ್ತಿರುವ ಚಿತ್ರ ಕಣ್ಣಮುಂದೆ ಸುಳಿಯಿತು. ಅದನ್ನು ಇಲ್ಲಿ ಬಣ್ಣಿಸಲಾಗಿದೆ. ಸೃಷ್ಟಿಮಾತೆ ತನ್ನ ಮಗುವಾದ ಭಕ್ತಜೀವನಿಗೆ ದರ್ಶನ ಕೊಡದೆ ತನ್ನ ಅದ್ಭುತಲೀಲೆಯಲ್ಲಿ ಬೆರೆತುಹೋಗಿರುವಳಲ್ಲ ಎಂಬ ಕೊರಗು ಈ ಕವನದಲ್ಲಿ ಸೂಚಿತವಾಗಿದೆ.

**ಆ ಸಂಜೆ.** ಒಬ್ಬ ಗೆಳೆಯನ 'ಶಾಂತಿನಿಕೇತನ'ವೆಂಬ ಮನೆಯ ಅಟ್ಟದ ಮೇಲೆ ಕುಳಿತು ಕಂಡ ಒಂದು ಸಂಜೆ ಈ ಕವಿತೆಯ ವಿಷಯ.

ಅಪ್ಪುಗೆ=ಆಲಿಂಗನ; ದಿಗಂತ=ದಿಕ್ಕಿನ ತುದಿ; ಹೊಂಗದಿರು=ಬಂಗಾರದ (ಹಳದಿ) ಕಿರಣ; ಭಾವುಕ=ರಸಿಕ.

**ರಾತ್ರಿಯೆಂಬವಳಾವ ಧಾತ್ರಿ.** ಧಾತ್ರಿ=ದಾಯಿ, ಸಾಕುತಾಯಿ; ಚೆನ್ನು=ಹಿತ, ಕಲ್ಯಾಣ; ಮುಗುಳು=ಮೊಗ್ಗೆ; ಪೀರು=ಕೆದರು, ಹರವು; ಮೋಡಿ=ಮೋಹಿನಿ, ಇಂದ್ರಜಾಲ; ಸವನಿಪುದು=ಬರುವುದು, ಒದಗುವುದು.

**ಭೂಕಂಪ.** ಬಿಹಾರದಲ್ಲಿ ಆದ ಭೂಕಂಪದ ಅನಾಹುತವನ್ನು ಕೇಳಿದಾಗ ಜೀವ ಕಲಮಲಗೊಂಡು ಈ ಕವಿತೆಯಲ್ಲಿ ತನ್ನ ಮರುಗನ್ನು ತೋಡಿಕೊಂಡಿತು. ಇದರಲ್ಲಿ ಕವಿ ಭೂಮಿತಾಯಿಯನ್ನು ಕುರಿತು ನುಡಿದಂತೆ ಕಲ್ಪಿಸಬೇಕು.

ಬೀಗಿ=ಉಬ್ಬಿ; ಎತ್ತಣದು=ಎಲ್ಲಿಯದು; ನೋಂತ=ವ್ರತತೊಟ್ಟ; ಝುಲ್ಲು=ಧಕ್ಕೆ, ಆಘಾತ.

**ಏರು-ಇಳಿ.** ಸಮುದ್ರದ ತೆರೆಗಳ ಏರಿಳಿತಗಳನ್ನು ಇಲ್ಲಿ ಒಂದು ಕ್ರಮದಿಂದ ಬಣ್ಣಿಸಿದೆ. ಪ್ರತಿಯೊಂದು ಪದ್ಯವಿಭಾಗದ ಮೊದಲಿನ ಏಳು ಸಾಲು ಏರನ್ನು, ಕೊನೆಯ ಏಳು ಸಾಲು ಇಳಿತವನ್ನು ಕುರಿತು ಇವೆ. ಮನುಷ್ಯ ಜೀವನಕ್ಕೆ ಅನ್ವಯಿಸುವ ಅರ್ಥಪುಷ್ಟಿಯನ್ನೂ ಇಲ್ಲಿ ಕಾಣಬಹುದು. ಏರು ಮನುಷ್ಯನ ಆನಂದಮಯವಾದ ಉನ್ನತ ಜೀವನವನ್ನೂ, ಇಳಿತವು ಮೋಹದ

ಅವನತ ಜೀವನವನ್ನೂ ಚಿತ್ರಿಸುತ್ತವೆ. ಕವಿಯ ವೈಯಕ್ತಿಕ ಅನುಭವಕ್ಕೆ ಈ ಅನ್ವಯವು ಸರಿಹೋಗುತ್ತದೆ.

ಹೊರೆಯೇರಿ=ಹಿರಿಹಿಗ್ಗಿ; ಹೊಂಗು=ಉಬ್ಬು; ಕೆಲಸಾರ್ಚಿ=ಮಗ್ಗುಲಿಗೆ ಬರಿಸಿ; ಚಲ=ಹಟ; ತಾರಗೆ=ನಕ್ಷತ್ರ; ನೇರಾಗಿ=ಸರಳವಾಗಿ; ಕೆಲೆ=ಆಡು, ನಲಿ; ನೊರೆ=ಬುರುಗು; ಕೆಳದಿ=ಗೆಳತಿ, ಪ್ರಿಯತಮೆ; ಮೇಗಡೆ=ಮೇಲಿನ ಕಡೆ, ಮುಗಿಲು; ಅರೆಗಲ್ಲು=ಒಂಡೆಗಲ್ಲು; ಪೋಪುದು=ಹೋಗುವುದು; ಕರಿಗರುಳನಿಟ್ಟುರ=ಕಪ್ಪುಕರುಳಿನ (ಹೃದಯದ) ನಿಷ್ಠುರತೆ.

**ಸಂಗೀತ-ಜನ್ಮ.** ಒಂದು ಕಾವ್ಯಕೇಳಿಯಲ್ಲಿ ಅಕಸ್ಮಾತ್ತಾಗಿ 'ಸಂಗೀತ' ಎಂಬ ವಿಷಯದ ಚೀಟಿ ಕೈಗೆ ಬಂದಾಗ ನಿಯಮಿತ ಅವಧಿಯಲ್ಲಿ ಬರೆದ ಕವನವಿದು.

(ಏಕೋಽಹಂ) ಬಹುಸ್ಯಾಂ=(ಒಬ್ಬನಿದ್ದೇನೆ) ಹಲವಾಗಿ ಹಬ್ಬುತ್ತೇನೆ (ಸೃಷ್ಟಿ ಮಾಡುವ ಮೊದಲು ಆದಿಪುರುಷ ಹೀಗೆ ಎಂದನೆಂದು ಉಪನಿಷತ್ತಿನಲ್ಲಿದೆ); ಅಸತೋಽಸದಜಾಯತ=ಏನೂ ಇಲ್ಲದ್ದು ಎಂಬುದರಿಂದ ಇದ್ದದ್ದು ಹುಟ್ಟಿತು (ಇದು ವೇದದಲ್ಲಿಯ ಸೂಕ್ತದ ಸಾಲು); ಒಳೆಗಾಳಿ=ಬಳೆಬಳೆಯಾಗಿ ಸುತ್ತುವ ಗಾಳಿ; ಸೋಽಹಂ=ಅವನೇ ನಾನು, ಆದಿಪುರುಷನೇ ನಾನು; ಹುಲಿದೊವಲರು=ಹುಲಿ ತೊಗಲಿನವರು; ಚೆನ್ನು=ಕೆಂಪು, ಚೆಲುವಿಕೆ.

**ಅಪರಂಪಾರ.** ವಿಶ್ವದ ಅಪಾರತೆಯನ್ನೂ ನಿಯಮಬದ್ಧತೆಯನ್ನೂ ಅನುಭವಿಸಿ ಬೆರಗಿನ ಮನೋವೃತ್ತಿಯಲ್ಲಿ ಇದ್ದಾಗ ಈ ಕವನ ಹುಟ್ಟಿದೆ.

ಕಿರುನೋಟ=ಸಂಕುಚಿತ ದೃಷ್ಟಿ; ಅರಿದಾದ ಅರಿವು=ಅದ್ಭುತ ಜ್ಞಾನ, ಚಿತ್‌ಶಕ್ತಿ.

**ಎಂದೊ ಏನೊ.** ಕವಿಯ ಕಾವ್ಯಜೀವನವು ಮೊದಲುಗೊಂಡಾಗ ಅನುಭವಿಸಿದ ಅದ್ಭುತರಮ್ಯತೆಯು ವಿವರವಾಗಿ ಇಲ್ಲಿ ಚಿತ್ರಿತವಾಗಿದೆ. ಅದು ಕೊನೆಬಾಳದೆ ಹೋಯಿತೆಂಬ ಕಳವಳವು ಮುಂದೆ ತಲೆದೋರಿದಾಗ ಇದನ್ನು

ಬರೆದಿದೆ. ಅದೇ ಈ ಕವನಕ್ಕೆ ಪ್ರೇರಕವಾಗಿದೆ; ಮೊದಲಿನ ಅನುಭವವೆಲ್ಲ ಸ್ಮೃತಿರೂಪವಾಗಿದೆ.

ಪುದಿದು=ತುಂಬಿಕೊಂಡು, ವ್ಯಾಪಿಸಿ; ಹೇಸಿ-ಹೂ=ಮಲೆನಾಡಿನಲ್ಲಿ ಒಂದು ಪ್ರಸಿದ್ಧ ಹೂ; ಮಲರು=ಹೂವು; ನೋಂಪಿ=ವ್ರತ; ಆಯ್ದ=ಆರಿಸಿದ, ಶ್ರೇಷ್ಠ; ಮುಡಿಪು=ಕಾಣಿಕೆ, ಆಹುತಿ; ಹೊಲೆ=ಕೆಡಕು, ವಿರೂಪ; ಓವ= ಪ್ರೀತಿಸುವ, ಕಾಯುವ.

**ಮಲೆನಾಡಿಗೆ ಮುಡಿಪು.** ಬಯಲುಸೀಮೆಯಲ್ಲಿ ಹುಟ್ಟಿ ಬೆಳೆದ ಕವಿ ಮೊಟ್ಟಮೊದಲನೆಯ ಸಾರೆ ಮಲೆನಾಡಿನ ಸೃಷ್ಟಿಯನ್ನು ಕಂಡು ಹೊಂದಿದ ಅನುಭವವು ಇಲ್ಲಿ ನಿರೂಪಿತವಾಗಿದೆ. 'ಮಲೆನಾಡಿನಲ್ಲಿ ಏನು ಹೊಗಳುವ ಹಾಗಿದೆ?' ಎಂಬ ತಟಸ್ಥವೃತ್ತಿಯು ಮೊದಲು ತಲೆದೋರಿ ಕೊನೆಗೆ ಒಂದು ಸೌಂದರ್ಯದರ್ಶನವು ಅನುರಿಸಿಕೊಂಡಿತು.

ಭೂ-ಭೂತ=ಭೂಮಿಯೆಂಬ ಭೂತ; ಹಳವೊದೆ=ಹಳೆಯ ಕಂಟಿ; ಇಡಿ-ಕಿರಿದ=ದಟ್ಟವಾಗಿ ಬೆಳೆದ; ತಿಳಿಗೊಳ=ತಿಳಿನೀರಿನ ಸರೋವರ; ನೆರೆ=ಪ್ರವಾಹ, ಉಕ್ಕು; ತಸಿಗೆಂಡ=ಕಾದ ಕೆಂಡ; ಬೇಗುದಿ=ಸಂತಾಪ; ಓಡ=ನಾವೆ; ತಂಗು= ನೆಲಸು, ನಿಲ್ಲು; ಈಜು=ಈಸು; ತಣಿವು=ತೃಪ್ತಿ, ಸೌಖ್ಯ; ಅಣಿಗಿ=ಮಗಳು; ಮಿಂಚುವೇಗ=ಮಿಂಚಿನ ವೇಗ; ಎಗರು=ಹಾರು, ನೆಗೆ; ಐಸಿರಿ=ಐಶ್ವರ್ಯ; ಮುನ್ನೀರು=ಸಮುದ್ರ; ಜೋಗ=ಜಲಪಾತ; ಕಳವೆ=ಭತ್ತದ ಗದ್ದೆ; ಒಸೆದು=ಪ್ರೀತಿಸಿ; ತೊನೆ=ತೂಗಾಡು; ಮೈಗೋಯಿಲ=ಮೈಯೆಂಬ ಗುಡಿ; ಅಕ್ಕರೆ=ಪ್ರೀತಿ; ರೂಹು=ರೂಪ; ಬೆಳೆಯುಳಿದುಂದು=ಬೆಳೆಯುವ ಅಳಿಯುವ ಸಮೃದ್ಧಿ; ನಿರ್ವೇದ=ಬೇಸರಿಲ್ಲದ (ನಿರ್ವೇದ=ಬೇಸರು).

**ಭಾರತ ಹುಣ್ಣಿವೆ.** ವರ್ಷವರ್ಷಕ್ಕೆ ಬರುವ ಭಾರತ ಹುಣ್ಣಿವೆಯ ಬೆಳ ದಿಂಗಳನ್ನು ನೋಡಿ, ಭಾರತ ದೇಶದ ಹುಣ್ಣಿವೆ (ಪೂರ್ಣತೆಯ ಕಾಲ) ಎಂದಿಗೆ ಬರುವುದೆಂದು ಭಾರತವನ್ನೆ ಇಲ್ಲಿ ಕೇಳಿದೆ.

ಹೊಂಗಳೆ=ಹೊನ್ನಿನ ಕಳೆ, ಒಂಗಾರದ ಕಾಂತಿ; ತೀವಿದ=ತುಂಬಿದ; ತೇಜಿ=ಕುದುರೆ.

**ಮಹಾತ್ಮರನ್ನು ಕುರಿತು.** ಭಾರತದ ಹಿರಿಯ ಮುಂದಾಳುಗಳಾದ ಮಹಾತ್ಮರನ್ನು ಕುರಿತು ಇದನ್ನು ಮುಖ್ಯವಾಗಿ ಬರೆದಿದೆ.

ಮುನಿಸು=ಸಿಟ್ಟು; ನಗೆ-ನೆರೆ=ನಗೆಯ ಉಕ್ಕು.

**ನಾಡವರು.** ಕನ್ನಡಿಗರ ಸಾಮೂಹಿಕ ರಾಷ್ಟ್ರಗೀತೆಯೆಂದು ಇದನ್ನು ರಚಿಸಿದೆ. ಇತಿಹಾಸಕಾಲದಲ್ಲಿ ಕನ್ನಡಿಗರು ಮಾಡಿದ ಸ್ಮರಣೀಯ ಕಾರ್ಯಗಳನ್ನು ಕಾವ್ಯಬಂಧದಲ್ಲಿ ಹೆಣೆದಿರುತ್ತದೆ. ನಾವು ಕರುನಾಡವರು ಎಂದರೆ ದೊಡ್ಡ ಮನಸ್ಸಿನಿಂದ ದೊಡ್ಡ ಕೆಲಸಗಳನ್ನು ಮಾಡುವವರು ಎಂಬ ಭಾವವು ಇದರ ಮುಖ್ಯ ಸೂತ್ರ.

ಅರಿದಾಗಿ=ಅದ್ಭುತವಾಗಿ, ಆಶ್ಚರ್ಯಕರವಾಗಿ; ಸೊಂಪು=ಸೌಂದರ್ಯ; ಪೆಂಪು=ವೈಭವ; ಪುಲಿಬಾಯಿ=ಒಬ್ಬ ಶಾತವಾಹನರಾಜನ ಹೆಸರು; ಗುಡಿ=ಧ್ವಜ; ಹುಡಿಯೂಡಿ=ಹುಡಿಯುಣ್ಣಿಸಿ, ಅವಮಾನ ಮಾಡಿ; ಚಾಗಿ=ತ್ಯಾಗಿ; ಮುಗಿಲದೀವಿಗೆ=ನಕ್ಷತ್ರ.

**ಎಂಥ ನಾಡಿದು.** ಸಂಸ್ಕೃತಿಸಂಪನ್ನವಾದ ಕನ್ನಡನಾಡು ಈಗ ಎಂಥ ಸಂಸ್ಕೃತಿಹೀನವಾದ ಕಾಡಾಗಿದೆ ಎಂಬುದೇ ಇದರ ಮೂಲಭಾವ.

ಹುಲುಸಾದ=ಸಮೃದ್ಧವಾದ; ಊಳಿಗ=ಸೇವೆ, ಚಾಕರಿ; ಮೊರಡು=ಹುರಬರಕ, ಅಡ್ಡತಿಡ್ಡ; ನನೆಕೊನೆವೋಗು=ಅರಳು, ಪೂರ್ಣತೆ ಹೊಂದು; ಮರಳು=ತಿರುಗಿ ಬಾ.

**ಕನ್ನಡದ ಚಂದ್ರ.** ಕನ್ನಡ ಸಂಸ್ಕೃತಿಯೆಂಬ ಚಂದ್ರನು ಅದೆಷ್ಟೊ ಹುಣ್ಣಿಮೆಗಳನ್ನು ಕಂಡಿರುವನು. ಇಂದು ಅವನ ಹೊಸ ಹುಣ್ಣಿಮೆಯು ಯಾವಾಗ ಕಾಣುವುದೆಂಬುದು ಇದರಲ್ಲಿಯ ಅಭಿಪ್ರಾಯ.

ಬೀಗಿದೆದೆ=ಉಬ್ಬಿದ ಎದೆ; ಕೆಚ್ಚು=ಸತ್ವ, ಉತ್ಸಾಹ; ಒದವು=ಬರವು, ಉದಯ; ಸೊಬಗು=ಚೆಂದ; ತಣಿಗಾಣು=ತೃಪ್ತಿಯಾಗುವಂತೆ ಕಾಣು.

**ಕಾರಣಪುರುಷ.** ಕನ್ನಡನಾಡಿನ ಕಾರಣಪುರುಷನು ನಿಶ್ಚಿತವಾಗಿ ಬರುತ್ತಲಿರುವನೆಂಬ ಆಶಾವಾದದ ಹಾಡಿದು. 'ಕಾರಣಪುರುಷ' ಎಂಬ ಕಾದಂಬರಿಯಿಂದ ಇಲ್ಲಿಗೆ ಎತ್ತಿಕೊಂಡಿದೆ.

ಕಾರಣಪುರುಷ=ಯುಗನಿರ್ಮಾಣಕಾರನಾದ ಮಹಾಪುರುಷ; ಇನಿ-ಜೇನು=ಸವಿಜೇನು; ಅರಪುದುಂಬಿ=ರಾಜಭ್ರಮರ; ಮುತ್ತು=ಮುದ್ದು; ಮಸುಳೆ=ಮಸುಕಾಗಲು; ಅಡಿವಜ್ಜೆ=ಪಾದದ ಗುರುತು; ಮಡಗಿರು= ಮುಚ್ಚಿರು.

**ಯುಗಾದಿ.** ಋತುಮಾನದ ಪ್ರಕಾರ ತಪ್ಪದೆ ಬರುವ ಹೊರಯುಗಾದಿ ವರ್ಷಕ್ಕೊಮ್ಮೆ ಬಂದೇ ಬರುತ್ತದೆ. ಆದರೆ ಜೀವಮಾನದ ಪ್ರಕಾರ ಜೀವನವನ್ನು ಹೊಸದು ಮಾಡುವ ಒಳಯುಗಾದಿ ಮಾತ್ರ ಹಿಂದೆ ನಡೆದಂತೆ ತೋರುತ್ತದೆ.

ಕಾಲದ ಅಡಿ=ಕಾಲಪುರುಷನ ಪಾದ; ಒಕ್ಕಲು=ಸುಗ್ಗಿ, ಸಂಪತ್ತಿ; ಬೀಕಲು=ಒಣಗಿದ್ದು, ವಿನಾಶ; ಮೊರೆ=ಬಿನ್ನಹ.

**ಎಲ್ಲಿದೆ ಯುಗಾದಿ.** ಯುಗದ ಆದಿ ಎಂಬ ಹೆಸರು ಸಾರ್ಥಕವಾದರೆ ನಿಜವಾದ ಯುಗಾದಿ. ಆದೇ ಇಂದಿನ ಜೀವನವನ್ನು ನೋಡಿದರೆ ಯುಗಾಂತವೆನ್ನುವ ಹಾಗಿದೆ. ಸ್ವಂತದ ಜೀವನದಲ್ಲಿ ಅತ್ಯಂತ ನಿರಾಶೆ ಕವಿದಾಗ ಈ ಕವಿತೆ ರೂಪ ತಾಳಿದೆ.

ಪರಮಿತೆ=ಪರಮಾವಧಿ; ಕಡೆ=ಅಂತ್ಯ, ಸಾವು; ಹಳನಡೆ=ಹಳೆಯ ರೀತಿ-ನೀತಿ.

**ಬೊಂಬೆ** ಮುಂಬಯಿಯಲ್ಲಿ ಹಲವು ದಿನವಿದ್ದು ಮಹಾಸಂತೆಯಂಥ ಆದರ ವಾತಾವರಣವನ್ನು ಅನುಭವಿಸಿ, ಬೆಂದು ನೊಂದು, ಹೆದರಿ ಮುದುರಿ,

ಮತ್ತೆ ಧೈರ್ಯಗೊಂಡು ಈ ದೀರ್ಘ ಕವನವನ್ನು ಅಲ್ಲಿದ್ದಾಗಲೇ ಬರೆಯು ಲಾಯಿತು.

ತಪ್ಪಲ=ಎತ್ತರದ ನೆಲ; ಪುಡಿಯಾಳು=ದುರ್ಬಲ ಮನುಷ್ಯ; ಉದ್ದಿಮೆ= ಉದ್ಯಮ, ವ್ಯಾಪಾರ; ಕಡೆಗೈ=ನಾಶಮಾಡು; ಶಿಖಿ=ಉರಿ, ಜ್ವಾಲೆ; ಕಾಳ್ಗಿಚ್ಚು=ಕಾಡುಕಿಚ್ಚು; ವಾಂಛಿತ=ಆಶೆ-ಅಪೇಕ್ಷೆ; ಬೊಂಬೆ=ಗೊಂಬೆ; ರುಚಿರ=ಸುಂದರ; ಸರ್ವಸಂನಿಧ=ಎಲ್ಲ ಕಡೆ ಇರುವ; ಹಾವಕೊಬ್ಬು=ಹಾವಿ ನಂಥ ಕೊಬ್ಬುವಿಕೆ; ಕಂಡರಿತೊಲಿವ=(ಕಂಡು ಅರಿತು ಒಲಿವ) ಕಂಡು ತಿಳಿದು ಪ್ರೀತಿಸುವವನು; ಅರಿದು ಒರೆ=ವಿಚಿತ್ರವಾದ (ಖಡ್ಗದ) ಒರೆ; ಬಂಟ=ಶೂರ; ಏಕಾಕಿ=ಒಬ್ಬೊಂಟಿಗ; ಎಂಬೆ=ಎನ್ನುವೆ.

**ಆಳಿಗಾಲ.** ಆಳುಗಡಲು=ದುಃಖದ ಸಮುದ್ರ; ಕೊಳಗುಳ=ಯುದ್ಧ, ಕಲಹ; ಹಿಳಿ=ಹಿಂಡು, ನಾಶಗೊಳಿಸು; ತತ್ತಳದಿ=ಕಚಿಪಿಚಿಯಾಗಿ;ಉಡುಗಣ= ನಕ್ಷತ್ರಸಮೂಹ; ಬಯಲು=ಮೋಡ; ತೂಳು=ಬೆನ್ನಟ್ಟು, ಹೊಡೆದೋಡಿಸು.

**ಬಯಲಾಯ್ತು.** ಹಲವು ಕಾಲದಿಂದ ರೂಪಗೊಳ್ಳುತ್ತಿದ್ದ ಆದರ್ಶ-ಮಂದಿರವೊಂದು ಕಣ್ಮರೆಯಾಗಲು ಇಲ್ಲಿಯ ಭಾವನೆಗಳು ಹುಟ್ಟಿದವು.

ಕಂತೆ=ಸುಳ್ಳು, ವ್ಯರ್ಥಸಂಗತಿ; ದಿವ್ಯಯಾನ=ದಿವ್ಯರಥ, ವಾಹನ; ಸುಳಿಯೆಲರು=ಸುಳಿಗಾಳಿ; ಕಲೆತಂದ=ಕೂಡಿಸಿ ತಂದ; ನರುಗಂಪು=ಸುವಾ ಸನೆ; ಸುರಭಿಸುಮಸಂಕುಲ=ಸುವಾಸ ಮತ್ತು ಹೂವಿನ ಗುಂಪು; ಮೃಣ್ಮಯದ=ಮಣ್ಣಿನ, ನಶ್ವರ; ಅತಿಮಾನುಷ=ಲೋಕೋತ್ತರ, ದಿವ್ಯ.

**ಪ್ರತಿಜೀವ.** ಇಂದಿನ ಜೀವನದಲ್ಲಿ ಸಮಸ್ಯೆಗಳು ಹೆಚ್ಚಿವೆ, ಶೋಕ ಸಂತಾಪಗಳು ಮಿತಿಮೀರಿವೆ. ಪ್ರತಿಜೀವದಲ್ಲಿ ನಿರಾಶೆ-ಅಶಾಂತಿಗಳಿಂದ ಒಂದು ಬಗೆಯ ಪ್ರಳಯಬುದ್ಧಿಯೂ ಹುಟ್ಟಿದೆ; ಪ್ರಳಯಕಾಲದಲ್ಲಿ ಜಗತ್ತನ್ನು ನಾಶಮಾಡುವುದರಲ್ಲಿಯೇ ಸಂತೋಷಹೊಂದುವ ಶಂಕರನಂತೆ ಪ್ರತಿಜೀವವು ಕಾಣುತ್ತದೆ. ಸ್ವಂತ ಜೀವನದ ಬಗ್ಗೆ ತೀವ್ರ ಜುಗುಪ್ಸೆ ಹುಟ್ಟಿದಾಗ ಈ ಕವಿತೆಯನ್ನು ಬರೆದಿದೆ.

ಮಸಣ=ಸ್ಮಶಾನ; ಪ್ರೇತ=ಹೆಣ; ಸೊಗ=ಸುಖ; ಆಶಾಭೂತ=ಆಶೆಯೆಂಬ ಭೂತ; ಕಪ್ಪಿಸು=ಕಪ್ಪುಗೊಳಿಸು; ಮೋಹರ=ಸಮೂಹ, ಸಾಲು; ಲಾಸ್ಯ=ಕುಣಿತ; ಸುಡುಗಾಡೊಡೆಯ=ಶಿವ.

**ಕಲ್ಪಾಂತ ರಾತ್ರಿ.** ಒಂದು ಅಮಾವಾಸ್ಯೆಯ ಮಧ್ಯರಾತ್ರಿಯಲ್ಲಿ ನಕ್ಷತ್ರನಿಬಿಡವಾದ ಆಕಾಶವನ್ನು ನೋಡಿ ಹೊಳೆದ ಕಲ್ಪನೆಯೊಂದು ಇಲ್ಲಿ ಮೂಡಿದೆ. ಸೃಷ್ಟಿಯ ಚಿತ್ರವು ಮನುಷ್ಯಜೀವನದ ದುಃಖಾಂತಕ್ಕೆ ರೂಪಕವಾಗಿದೆ.

ಭಾಲದೇಶ=ಹಣೆಯ ಭಾಗ; ಹಿರಿಗಡಲು=ಮಹಾಸಾಗರ; ಹೊಳವು=ಹೊಳಪು, ಪ್ರಖರ ಬೆಳಕು; ಹಗೆಯ=ಹಗೆಯು, ತಗ್ಗು, ಕುಳಿ.

**ಇಂಥಾ ಜನ್ಮಾ ನೋಡೊ.** ಒಬ್ಬ ಕುರುಡ ತಿರುಕನು 'ಇಂಥಾ ಜನ್ಮಾ ನೋಡೋ ಧರ್ಮಾ ಮಾಡೋ' ಎಂದು ಹಾಡುತ್ತ ಭಿಕ್ಷೆ ಬೇಡುವುದನ್ನು ಕೇಳಿದಾಗ ಆ ಹಾಡನ್ನು ಪೂರ್ತಿಗೊಳಿಸಬೇಕೆಂದು ತೋರಿತು. ಅದೇ ಇಲ್ಲಿಯ ಹಾಡು.

**ಬಡವರ ಹಾಡು.** ಬಡವರ ಮನೋವೃತ್ತಿಯಲ್ಲಿಯ ದೈವಾಧೀನತೆ, ಅದರಿಂದ ಉಂಟಾದ ಆಶಾವಾದಿತ್ವ ಇವುಗಳನ್ನು ಈ ತ್ರಿಪದಿಗಳಲ್ಲಿ ಚಿತ್ರಿಸಿದೆ.

**ಆಸೆ.** ಸಾವಿನ ಹೊಳೆಯಂತಿದ್ದ ಈ ಭಂಗುರ ಪ್ರಪಂಚದಲ್ಲಿ ಮುಂದೆ ಬರುವುದರ ಆಸೆಯೆಂಬ ಈಸುಗುಂಬಳಕಾಯಿಯ ಆಸರ ಹೊಂದಿ ಮನುಷ್ಯರು ಬಾಳುತ್ತಿರುವರು ಎಂಬುದು ಇಲ್ಲಿಯ ಅಭಿಪ್ರಾಯ.

**ಏಕೆ.** ಕೊನೆಯ ಎರಡು ಸಾಲುಗಳಲ್ಲಿ ಇದರ ಮುಖ್ಯ ಭಾವವಿದ್ದು ದೃಷ್ಟಾಂತಗಳಿಂದ ಅದನ್ನು ಸಾಲು ಸಾಲಿಗೆ ಬೆಳಸಿದೆ.

ಚರಣಗಲಿತ=ಕಾಲು ಮುರಿದ; ಊಟೆ=ಸೆಲೆ, ಬುಗ್ಗೆ.

**ಹೆಂಡsತಿ ಆಗುವಾ ಹೆಂಗsಸೆ ಕೇಳ.** ತುಂಬು-ನೆರೆ = ತುಂಬಿದ ಪೂರ,

ಪ್ರವಾಹ; ಸೂರೆಮಾಡಿ=ಹೆಚ್ಚಾಗಿ ಕೊಟ್ಟು, ತೂರಾಡಿ; ಓರಲ್ಲಿ ಮನೆಮನೆಗೆ ಹೋಗಿ ಮುತ್ತೈದೆಯರ ಕಾಲು ತೊಳೆಯುವ ಪದ್ಧತಿಯು ಉಲ್ಲೇಖವಿದೆ. ಚಿನ್ನ=ಬಂಗಾರ.

**ಗಂಡನಾಗುವ ಜಾಣ.** ಕಂಡಿತದ ನುಡಿ = ಸ್ಪಷ್ಟಮಾತು; ಒಲವು-ಗೊಡ=ಪ್ರೀತಿಯು ಕೊಡ; ತೊತ್ತು=ದಾಸಿ; ನಗೆ ನಲಿವು = ವಿನೋದ, ಸಂತೋಷ; ತಿಳಿಗಣ್ಣು=ತಿಳಿವಳಿಕೆಯ ವಿವೇಕದ ದೃಷ್ಟಿ; ಅಮಿತ=ಅನಂತ; ಲೆಕ್ಕವಿಲ್ಲದ; ಹಸನಾಗಿ=ನಿರ್ಮಲವಾಗಿ; ಹಿರಿಯೊಡೆಯ=ದೇವ; ಬೆರಕೆ=ಸಮ-ರಸ; ಅಂಜದರ=ಅಂಜದೆ ಇರುವವರ; ಹಗೆ=ವೈರ.

**ಗೆಳೆತನದ ಗೀತ.** ಗೆಳೆಯರ ಸಮೂಹಗೀತೆಯಾಗುವಂತೆ ಇದನ್ನು ರಚಿಸಿದೆ.

ಹತ್ತುಗಡೆ=ಆಪ್ತಸಂಬಂಧ; ಅನುನಯ=ಹೊಂದಿಕೆ, ಒಡಂಬಡ.

**ಗೆಳೆತನ.** ಗೆಳೆತನ ಹುಟ್ಟಿ ಬೆಳೆದು ಮಾಗಿದ ಬಗೆಯನ್ನು ಇಲ್ಲಿ ವರ್ಣಿಸಿದೆ. ಗೆಳೆಯರು ಒಂದು ಬೇವಿನ ಮರದ ಬುಡದಲ್ಲಿ ಕುಳಿತು ತಮ್ಮ ಸುಖ ದುಃಖಗಳನ್ನು ತೋಡಿಕೊಂಡು ಗೆಳೆತನದ ಆತ್ಮೀಯತೆಯನ್ನು ಹೊಂದುತ್ತಿದ್ದರು. ಆ ಬೇವಿನ ಮರವೇ ಈ ಹಾಡಿಗೆ ಸ್ಫೂರ್ತಿ ಕೊಟ್ಟಿದೆ.

**ಗೆಳೆಯನಿಗೆ.** ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ವಿದೇಶಕ್ಕೆ ಹೊರಟ ಗೆಳೆಯನಿಗೆ ಇದು ಶುಭಚಿಂತನೆಯ ಕವಿತೆ.

ದೀಂಕಿಡು=ಹಾರು, ನೆಗೆ; ತಾಳೆ=ತಾಳೆಯ ಮರ; ಜಸಗೊಡೆ=ಕೀರ್ತಿಯಛತ್ರ; ತಾರಿದ=ಒಣಗಿದ (ತಾರು=ಒಣಗು).

**ಪ್ರಲ್ಹಾದ !** ಈ ಹೆಸರಿನ ಗೆಳೆಯನ ಮದುವೆಯ ಹೊತ್ತಿಗೆ ಅವನಿಗೆ ಸಲ್ಲಿಸಿದ ಕಾಣಿಕೆ ಕವಿತೆಯಿದು.

ತತಿ=ಸಮೂಹ; ಮಧುಪ=ಭ್ರಮರ; ತಣಿವು-ತೊರೆ=ತೃಪ್ತಿಯ ನದಿ; ಸಂಚಯ=ಸಂಚಿತ, ಕೂಡಿಟ್ಟುದು.

**ಗೆಳೆಯನಿಗೆ.** ರಾಮನೆಂಬ ಗೆಳೆಯನ ಲಗ್ನದ ಕಾಲಕ್ಕೆ ಅವನ ವ್ಯಕ್ತಿತ್ವವನ್ನು ಸೂಚಿಸಿ ಅವನ ದಾಂಪತ್ಯಜೀವನಕ್ಕೆ ಶುಭವನ್ನು ಇಲ್ಲಿ ಕೋರಿದೆ.

ಪೀಯೂಷ = ಅಮೃತ; ಸಾರಾಯ = ಸಾರ, ರಸವತ್ತಾದ ಭಾಗ; ಸರ್ವಗ=ಸರ್ವವ್ಯಾಪಿ ದೇವ; ಮನದನ್ನೆ = ಪ್ರೀತಿಯಾಕೆ, ಪತ್ನಿ; ಸೋಗದ ಸೋನೆ=ಸುಖ ಪ್ರವಾಹ.

**ಬೆಳೆಯುತಿದೆ.** ಸ್ವಂತದ ಪ್ರಪಂಚವೆಲ್ಲ ನೂರಾರು ನೋವುಗಳಿಂದ ಗಾಸಿಗೊಂಡು ಪ್ರಗತಿಯ ದಾರಿಯಿಂದ ಹೊರವಾಯಿತೆಂದು ಒಮ್ಮೆ ತೋರಿತು. ಆಗ ಅದಕ್ಕೆ ಪ್ರತಿಕ್ರಿಯೆಯಾಗಿ ಇನ್ನೊಂದು ಚಿತ್ತಲಹರಿ 'ಎಲ್ಲವೂ ಬೆಳೆಯುತಿದೆ' ಎಂದು ಸಾರಿತು. ಅದೇ ಈ ಷೋಡಶಪದಿಯ ರೂಪ ತಾಳಿದೆ. ಹಾಗೂ ಹೀಗೂ ಜಗತ್ತು ಬೆಳೆಯುತಿದೆ, ಅದರ ಲೀಲೆಯಲ್ಲಿ ಬೆರೆತು ಬಾಳುವ ಮನಸ್ಸು ಮಾತ್ರ ಬೆಳೆಯಬೇಕು ಎಂಬುದೇ ಆ ಚಿತ್ತಲಹರಿ.

ಮಾತುಳಿ (ಮಾತು + ಉಳಿ)=ಮಾತು ಬಿಡು; ಬೆಂದುಗುವ (ಬೆಂದು ಉಗುವ)=ಸುಟ್ಟು ಹೊರಬರುವ; ಚಣಚಣ=ಪ್ರತಿಕ್ಷಣ; ದೇವ-ಜೀವಿ=ದೇವನ ಕೆಲಸಕ್ಕಾಗಿ ಬಾಳುವವರು.

**ತಾಯಿ.** ತಾಯಿ ತೀರಿ ಎರಡು ವರ್ಷಗಳಾದ ಮೇಲೆ ಈ ಸುನೀತವು ಅವಳಿಗೆ ಅರ್ಪಿಸಿದ ಶ್ರದ್ಧಾಂಜಲಿ.

ತಾಣ=ಸ್ಥಳ; ನೆನಹು=ಸ್ಮರಣ, ನೆನಪು; ತೆರೆ=ಪರದೆ; ಮಡಿಲು=ಉಡಿ; ಕಲ್ಪ=ಅನೇಕ ಯುಗಗಳ ಕಾಲಾವಧಿ.

**ಪ್ರೇಮವೇ.** ಕಾಮನೆ=ಅಳಿಯಾಸೆ, ಕೆಟ್ಟ ಬಯಕೆ; ಕಲ್ಪಾಂತಾನನೆ=ಪ್ರಳಯಮುಖಿ; ಕಾಮಧೂಮಾಂಧಾರ್ತ=ಕಾಮದ ಹೊಗೆಯಿಂದ ಕುರುಡಾಗಿ ನೊಂದ; ಇರ್ಪೆ=ಇರುವೆ.

**ಪ್ರೇಮಗಂಗಾ.** ಆಯುಷ್ಯದ ಜೊತೆಗಾತಿಯನ್ನು ಕುರಿತು ಇದನ್ನು ಬರೆದಿದೆ.

ಬರಡು=ನಿಸ್ಸತ್ವ, ವಿಫಲ; ಅಲ್ಪರಿದು=ಭಾವಯುತವಾಗಿ, ಕಳಕಳಿಯಿಂದ; ಕಾಂಬೆನೇ=ಕಾಣುವೆನೇ; ಗಿರಿ=ಬೆಟ್ಟ, ಪರ್ವತ; ಸ್ವಾದ=ರುಚಿ.

**ನನ್ನ ಕಮಲಿನಿ.** ಒಬ್ಬ ಗೆಳತಿಯನ್ನೂ ಅವಳ ಪ್ರಣಯರೀತಿಯನ್ನೂ ಇಲ್ಲಿ ವರ್ಣಿಸಲಾಗಿದೆ.

ಮುಕುರ = ಕನ್ನಡಿ; ಜಿಹ್ವೆ = ನಾಲಿಗೆ; ಇಸಿಸೆ = ಇಷ್ಟೆ, ಸ್ವಲ್ಪೆ; ಕೂರ್ವೆ=ಪ್ರೇಮ; ಕೊರಗು=ದುಃಖ.

**ಬೆಳೆಯುವ ಗರ್ಭಕ್ಕೆ.** ಇಳೆ-ಬೆಳಕು=ಭೂಮಿಯ ಮೇಲಿನ ಬೆಳಕು; ಒರಗು=ಮಲಗು; ಮಾಸಬಲೆ=ಮಾಂಸದ ಬಲೆ; ಬಿಚ್ಚು=ಸ್ವತಂತ್ರತೆ; ಮುಚ್ಚಂಜೆ=ಮೂರುಸಂಜೆ; ಅಂಬುಜ=ಕಮಲ.

**ಹುಟ್ಟು-ಹಬ್ಬ.** ಬೇನೆಯಿಂದ ಬಳಲುವ ಸ್ವಂತದ ಮಗುವಿಗೆ ಎರಡನೆಯ ವರ್ಷ ತುಂಬಿದಾಗ ಅವಳ ಹುಟ್ಟುಹಬ್ಬದ ದಿನ ಇದನ್ನು ಬರೆದಿದೆ. ತಾಯಿ ಮಗುವಿಗೆ ಹೇಳಿದ ಮಾತೆಂಬಂತೆ ಕಲ್ಪಿಸಬೇಕು.

ಬೆಂಗಾಡು = ಸುಟ್ಟಕಾಡು; ನುಣ್ಣುಗುರುಳಾಟ = ನುಣುಪಾದ ಉಂಗುರುಗೂದಲಿನ ಆಟ; ನಡು=ಟೊಂಕ; ಕಲೆಕಲೆತು=ಕೂಡಿಕೊಂಡು; ಕಸುವಳಿದ=ಶಕ್ತಿಗುಂದಿದ; ಬೆಸೆ=ಕೂಡು, ಬೆರೆತುಕೊಳ್ಳು; ಹಸವಳಿದ=ಚೆಂದ ಹೋದ.

**ಬೀರಿಯ ಪ್ರೀತಿಯ ಕರೆ.** ಇಂಗ್ಲಿಷಿನಲ್ಲಿಯ ಒಂದು ಕುರುಬರ ಹಾಡನ್ನು ಗೆಳೆಯರಿಬ್ಬರು ಕೂಡಿ ಒಂದೊಂದು ಪಾತ್ರ ವಹಿಸಿ ಇಲ್ಲಿ ಅನುವಾದಗೊಳಿಸಿದೆ. ಗಿರಿಮಲ್ಲ-ಬೀರಿ ಇವರ ಸರಳ ಪ್ರೀತಿಯ ಅನ್ಯೋನ್ಯಭಾವದ ಏರಾಟವು ಇಲ್ಲಿಯ ಮುಖ್ಯ ಸೂತ್ರ.

ಇನಿದನಿ=ಸುಸ್ವರ; ಕಾಯಾಕ=ಕಾಯಲಿಕ್ಕೆ;ಹೊಸದೇನ=ಹೊಸದೆನು; ಪಾವಡ=ರುಮಾಲ; ದಡಿ=ಅಂಚು; ನಿಸ ಹಂತಿ=ನಿನ್ನ ಹತ್ತಿರ.

**ಚೇತನದ ಚೆಲುವೆ.** ಚೇತನವು ತನ್ನರಿವು ಇಲ್ಲದೆ ತೀರ ಮುದುಡಿ ಕೊಂಡು ಹೊಸ ಹುರುಪಿಲ್ಲದೆ ಇರುವಾಗ ಚೇತನವೆಂಬ ಚೆಲುವೆಯನ್ನು ಕುರಿತು ಈ ಜಾಗೃತಿಗೀತವನ್ನು ಹಾಡಲಾಯಿತು.

ನೂತನ=ಹೊಸದು; ನೂತನೆ=ಹೊಸಬಳು; ಮರವು-ಹಾಸಿಗೆ=ಅಜ್ಞಾನ ವೆಂಬ ಹಾಸಿಗೆ; ಎನಿತೆನಿತು=ಎಷ್ಟು ಎಷ್ಟು; ಸೀದು=ಸುಟ್ಟು; ಚಣನೋವು= ಸಂಸಾರದ ತಾಪತ್ರಯಗಳಿಂದ ಆಗುವ ಕ್ಷಣದ ನೋವು; ಕೊಳೆಯ ಕೊಳ= ಹೊಲಸಿನ ಸರೋವರ; ಅಕ್ಷಯ=ನಾಶವಿಲ್ಲದ, ಸಂತತ.

**ಜೀವಗಾಥೆ.** ಸುಖವನ್ನು ಹೊರಹೊರಗೆ ಹುಡುಕುತ್ತ ಹೋದರೆ ಮಾಯದ ಹೆಣ್ಣಿನಂತೆ ಅದು ಕೈಗೆ ಸಿಕ್ಕದೆ ಹೋಗುವುದು, ಒಳಗೆ ನೋಡಿ ದರೆ ಅದು ತಾಯಿಯಂತೆ ಹತ್ತಿರ ಇರುವುದು. ಈ ಸಂದೇಶವನ್ನು ಅನೇಕ ಜನ್ಮಗಳಲ್ಲಿ ಸುಖದ ಶೋಧವನ್ನು ಮಾಡಿದ ಜೀವ ಹೇಗೆ ಪಡೆಯಿತೆಂಬುದರ ವರ್ಣನೆ ಇಲ್ಲಿದೆ.

ಸೊಗಸುಗಾತಿ = ಒಯ್ಯಾರಿ, ಬೆಡಗಿನ ಹೆಣ್ಣು; ಹಯ = ಕುದುರೆ; ಸೊಗದ ಚಣ=ಸುಖದ ಕ್ಷಣ; ಸದೆಪು=ಸೌಖ್ಯ; ತರಗೆಲೆ=ಒಣಗಿದಲೆ; ನೆಮ್ಮು=ನಂಬು.

**ಇಂದು ನಾ ನಿಂತಿರುವೆ.** ಒಂದು ಸೂಕ್ಷ್ಮವಾದ ಆಧ್ಯಾತ್ಮಿಕ ಅನುಭವ ವನ್ನು ಇಲ್ಲಿ ತುಸುವಾಗಿ ಚಿತ್ರಿಸಿದೆ.

ತಂಪನಿ=ತಂಪು ಹನಿ; ಸವಿ ಸೆಳಕು=ಸವಿಯ ತುಣುಕು.

**ಜೀವ-ಶುಕ.** ಸಾಮಗಾನ=ಸಾಮವೇದದ ಗಾಯನ,ಪವಿತ್ರ ಗಾಯನ; ಅಂದ=ಚೆಂದ; ಬಿಸುಡು=ಬಿಡು, ಒಗೆ; ನೆನವು-ದೀಪಿಕೆ=ಸ್ಮರಣೆಯ ದೀವಿಗೆ; ಸೊಡರು=ದೀಪ.

**ಕಾಂತಾರದೊಳ ಕಾಸಾರ.** ಮನಸ್ಸಿನ ಶಾಂತಿ ಎಂಬುದು ಒಂದು ತಿಳಿ ನೀರಿನ ಕಾಸಾರ. ಆದರೆ ಸಂಸಾರ ಘೋರ ದುಃಖ ಎಂಬ ಕಾಂತಾರದ ನಟ್ಟನಡುವೆ ಈ ಕಾಸಾರವಿದೆ. ಅದರಿಂದ ಕಾಂತಾರದ ಭಯದಿಂದ ಕಾಸಾರದ ಶಾಂತಿ ಸೌಖ್ಯವನ್ನು ಹೊಂದದಂತಾಗಿದೆ ಎಂದು ಇಲ್ಲಿಯ ತಾತ್ಪರ್ಯ.

ಅಲೆ=ತಿರುಗು, ಸುತ್ತಾಡು; ಅರಸಿ = ಹುಡುಕಿ; ಆರಾವ = ಕೂಗು, ಗರ್ಜನೆ; ಕಾಸಾರ = ಅಡವಿ; ಕಾಸಾರ=ಸರೋವರ; ತಿಳಿಗೊಳ=ನಿರ್ಮಲ ಸರೋವರ; ಕಡಗಿ=ಉತ್ಸಾಹಗೊಂಡು

**ಎಲೆ ಜೀವ.** ದಗ್ಧದೇಹ=ಸುಟ್ಟ ಮೈ; ನೆರವು = ಸಹಾಯ; ಒರೆ= ಹೇಳು.

**ದಿನದಿನದ ಬಳಲಿಕೆ.** ಬಯಸಿದ ಯಶಸ್ಸು ದೊರೆಯದೆ ಮನಸ್ಸು ಖಿನ್ನವಾದಾಗ ಈ ಕವಿತೆ ರಚಿತವಾಗಿದೆ. ಸಂದರ್ಭವಿಶೇಷದಲ್ಲಿ ಜೀವನದ ಸಾಮಾನ್ಯ ಕರುಣವು ತಲೆಯೆತ್ತಿಕೊಂಡಿದೆ.

ಕಣ್ಣಾಲಿ=ಕಣ್ಣುಗುಡ್ಡೆ; ಕೇಳಿ=ಆಟ; ಮಾಡಲಾಪೆ = ಮಾಡಬಲ್ಲೆ; ಮಿರುಗು=ಹೊಳೆ.

**ಮೂಲ ಮಾನಸ ಸರ.** ಜೀವನದ ಮೂಲ ಶಕ್ತಿಸಂಚಯವೇ ತೀರಿಹೋದಾಗ ಎಲ್ಲ ಬಗೆಯ ದುರ್ಬಲತೆ ಇರುವುದು ಸ್ವಾಭಾವಿಕ. ಮಾನಸಸರ, ಗಂಗಾನದಿ, ಹಿಮಾಲಯ ಇವುಗಳ ರೂಪಕದಲ್ಲಿ ಈ ವಿಷಯವನ್ನು ನಿರೂಪಿಸಿದೆ.

ಬರೆತು=ಬತ್ತಿ (ಬರೆ–ಧಾತು) ಗಾರು=ತಂಪು, ಮೊತ್ತ=ದಟ್ಟ ಸಾಲು, ಸಮೂಹ; ನಯನ=ಕಣ್ಣು; ಕಾಳ್ಪುರ=ಕಾಡಿನ ಹೊಳೆ, ಪ್ರವಾಹ;

**ಆನಂದವೇ!** ನಿರ್ಮಲಹರ್ಷ, ಲೀಲಾವೃತ್ತಿ ಇವುಗಳಿಂದ ಎಂಥ ಸಣ್ಣ ಬಾಳು ಕೂಡ ಹೊಳೆಯುತ್ತದೆ. ಇಂಥ ಆನಂದವು ಸ್ವಂತದ ಬಾಳಿನಲ್ಲಿ ಬರಲಿ ಎಂದು ಇಲ್ಲಿ ಹಾರೈಕೆಯಿದೆ.

ಮಂದಾರ=ನಂದನದ ಹೂ; ಕುಣಿಕೆ=ಸಣ್ಣ ಹಗ್ಗ; ಮಿಾಯಿಸು=ಸ್ನಾನಮಾಡಿಸು; ಶಿಶುತನ=ಬಾಲ್ಯ; ಚೆಲುಗಡಲು=ಸೌಂದರ್ಯದ ಸಮುದ್ರ; ರೂಹು=ರೂಪ; ಬರುವನಿತು=ಬರುವಷ್ಟು.

**ಬಾಳು ಜೀವವೇ !** ವೃಂದ=ಸಮೂಹ; ಮುರುಟು=ಮುರಿಗೆ ಬೀಳು, ಬಾಡು; ಪೋಪುದು=ಹೋಗುವುದು; ಸೇಸೆ=ಅಕ್ಷತೆ; ತನಿತು=ಪೂರ್ಣವಾಗಿ, ಬಾರಿ=ಸಲ, ಸಾರೆ; ನೀಳ್ದ=ದೀರ್ಘ.

**ಹಿರಿಯ ಚೆಂದವು.** ಬಾಳುವೆಯ ಸಿಹಿ-ಕಹಿಗಳೆಲ್ಲವನ್ನು ಅನುಭವಿಸಿ ಮುಗುಳ್ನಗೆಯಿಂದ ಸೋಲು ಗೆಲವನ್ನು ಕೈಕೊಂಡು ಮುಂದೆ ಹಾದಿ ನಡೆಯುವುದೇ ಹೆಚ್ಚಿನ ಚೆಂದವೆಂಬುದು ಇಲ್ಲಿಯ ಭಾವ.

ಕುಂದದ=ಕಡಿಮೆಯಾಗದ, ಕುಂದದ ಹೂವಿನಂಥ; ತೊಡೆದು=ಒರಸಿ, ಕಳೆದು; ಹಳನೆನಹು=ಹಳೆಯ ನೆನಪು; ಕರ್ಮರಚಿತ=ಪ್ರಾರಬ್ಧ ಅಥವಾ ವಿಧಿ ಕಟ್ಟಿದ; ನಿಚ್ಚಹಾಸ=ನಿತ್ಯನಗೆ.

—

# ತಿದ್ದುಪಡಿ

—※—

| ಪುಟ. | ಸಾಲು. | ತಪ್ಪು. | ತಿದ್ದುಪಡಿ. |
|---|---|---|---|
| ೪ | ೭ | ಹೇಗೆ | ಹೇಗೊ |
| ,, | ,, | ಜನಜಾತ್ರೆ ? | ಜನಜಾತ್ರೆ. |
| ೨೩ | ೧೨ | ಎನೆತೆನುತ ? | ಎನುತೆನುತ |
| ೨೭ | ೮ | ಗಳಂತೆ. | ಳಂತೆ |
| ೩೧ | ೧೯ | ನೋಟ-ಭಾವವು | ನೋಟಭಾವವು |
| ೩೨ | ೧೬ನೆಯ ಸಾಲಿನ ಕೆಳಗೆ | . .. .. . | —ರಂಗವಿನಾಯಕ. |
| ೩೪ | ೧೦ | ಜೀವದಾಶದ | ಜೀವದಾಳದ |
| ೩೫ | ೧೫ | ಇವಳು ಮಮತೆ | ಇವಳು ಮುಟ್ಟಲು ಮಮತೆ |
| ೩೯ | ೨೦ | ಹುಟ್ಟಲು | ಹುಟ್ಟಿತು. |
| ೪೧ | ೧೦ | ಉಸಿರು ಪೂಸಿ | ಉಸಿರು ಸೂಸಿ |
| ೪೨ | ೧೧ | ಕಲೆಯೂ | ಕಲೆಯು |
| ೪೬ | ೧೮ | ಕಣ್ಣಾಟ | ಕಣ್ಣಾಟ |
| ೪೭ | ೫ | ಬಿಸುಡರೆದೆ | ಬಿಸುಡಿರೆದೆ |
| ,, | ೯ | ದಣಿಯದಿ | ದಣಿಯದ |
| ,, | ೧೫ | ಮರಮರದ | ಮರಮರವ |
| ೫೩ | ೭ | ಓಡದು | ಹಿಡಿದು |
| ೫೪ | ೧೩ | ತೇಜಿದಿ | ತೇಜದಿ |
| ೫೫ | ೧೮ | ಮಡಿಗಿರುವುದು | ಮಡಗಿರುವುದು |
| ೫೬ | ೬ | ಕಾಲದಡಿಯುಳೊಂದು | ಕಾಲದಡಿಯೊಳೊಂದು |
| ೫೭ | ೧೮ | ಯುಗಾದಿಯೆ ? | ಯುಗದಾದಿಯೆ ? |
| ,, | ೨೨ | ಳಾಡಿಯು | ಳಾದಿಯು |
| ೫೯ | ೧ | ಬರಿಗಣ್ಣೆ | ಬರಿಗಣ್ಗೆ |
| ,, | ೧೦ | ಅಣೆಕಿಸುವ | ಅಣಕಿಸುವ |
| ೬೧ | ೧೮ | ಸಿಲುಕದ | ಸಿಲುಕದೆ |